ಮದ್ವೈದಿಕ ವೈಷ್ಣವಸಿದ್ಧಾಂತ ಪ್ರತಿಷ್ಠಾಪನಾಚಾರ್ಯ

ಮಹಂಸೇತ್ಯಾದಿ ಗುಣಗಣಾಲಂಕೃತ ಶ್ರೀಮದುತ್ತರಾದಿಮಠಾಧೀಶ

ಮತ್ಸತ್ಯಧ್ಯಾನತೀರ್ಥ ಶ್ರೀಪಾದಂಗಳವರಿಂದ

ವಿರಚಿತವಾಗಿ,

ಸ. ಕೃಷ್ಣಾಚಾರ್ಯರಿಂದ
ಭಾಷಾಂತರ ಮಾಡಲ್ಪಟ್ಟಿತು.

ಪದ್ಮಸರೋವರ (ತಿರುಚಾನೂರು)
ನ್ಮಧ್ವ ಸಿದ್ಧಾಂತಾಭಿವೃದ್ಧಿಕಾರಿಣೀ ಸಭೆಯವರಿಂದ
ಪ್ರಚಾರಮಾಡಲ್ಪಟ್ಟಿತು.

ಶ್ರೀ ಜಾನಕಿರಮಣಾ ಪ್ರೆಸ್, ತಿರುಪತಿ.

1934.

ಶ್ರೀ.

ಸಂಯಮನೀಪುರದ ಹೈಕೋರ್ಟ್.

ವೇದಾಂತ ವಿಚಾರಣ

# ಸಿವಿಲ್ ಸೂಟ್.

೧–ನೆ. ಇಸ್ಯೂ.



ಶ್ರೀಮದ್ವೈದಿಕ ವೈಷ್ಣವಸಿದ್ಧಾಂತ ಪ್ರತಿಷ್ಠಾಪನಾಚಾರ್ಯ
ಶ್ರೀಮತ್ಪರಮಹಂಸೇತ್ಯಾದಿ ಗುಣಗಣಾಲಂಕೃತ ಶ್ರೀಮದುತ್ತರಾದಿಮಠಾಧೀಶ
ಶ್ರೀ ಶ್ರೀಮತ್ಸತ್ಯಧ್ಯಾನತೀರ್ಥ ಶ್ರೀಪಾದಂಗಳವರಿಂದ
ವಿರಚಿತವಾಗಿ,

ಸ. ಕೃಷ್ಣಾಚಾರ್ಯರಿಂದ
ಭಾಷಾಂತರ ಮಾಡಲ್ಪಟ್ಟಿತು.



ಪದ್ಮಸರೋವರ (ತಿರುಚಾನೂರು)
ಶ್ರೀಮನ್ಮಧ್ವಸಿದ್ಧಾಂತಾಭಿವೃದ್ಧಿಕಾರಿಣೀ ಸಭೆಯವರಿಂದ
ಪ್ರಚಾರ ಮಾಡಲ್ಪಟ್ಟಿತು.

ಶ್ರೀ ಜಾನಕಿರಮಣಾ ಪ್ರೆಸ್, ತಿರುಪತಿ.

1934.

ಶ್ರೀ

ಶ್ರುತ್ವಾಯತ್ಸಿಂಹನಾದಂ ಕತಿಚನ ಕುಧಿಯಃ ಪಂಡಿತಂ ಮನ್ಯಮಾನಾಃ
ಪ್ರಾಪ್ತಾಗೋಮಾಯುಭಾವಂ ಕಿಮು ಪಿಕಲಕಲಂ ಕುರ್ವತೇ ಕಾಂದಿಶೀಕಾಃ ॥
ವಿದ್ಯಾಪೀಠೇಪಿಕಾಶ್ಯಾಂ ಸಕಲಬುಧಜನಾಃ ಶಿಷ್ಯಭಾವಂ ಪ್ರಪನ್ನಾಃ
ಪೀತ್ವಾ ಯಚ್ಛ್ರ್ಯೋಪದೇಶಾಽಮೃತಮಿಹ ಸುಧಿಯಃ ಸಂಭವಂತಿ ಪ್ರಸನ್ನಾಃ ॥
ಜಾತೋಯಸ್ಯಾಸ್ಯ ಕಂಜಾಮೃತರಸನಿಕರೈರ್ನಾಸ್ತಿಕಾಧ್ವಾ ವಿಶೀರ್ಣಃ
ಶೇಷಃ ಕಿಂವಾ ಗಣೇಶಃ ಸ್ವಯಮಥ ಕಿಮಹೋ! ವಾಕ್ಪತಿಶ್ಚಾವತೀರ್ಣಃ ॥
ಶ್ರುತ್ಯೈವದ್ವೈತಸಿದ್ಧಿಂ ಕಥಯಿತುಮತುಲಾಂ ತತ್ವವಿತ್ಸಿದ್ಧಮಂತ್ರಃ
ಶ್ರೀಸತ್ಯಧ್ಯಾನತೀರ್ಥಃ ಸುಮತಿನುತಪದಃ ಸರ್ವತಂತ್ರಃ ಸ್ವತಂತ್ರಃ ॥

ಶ್ರೀಸೀತಾರಾಂಝಾ (ಮೈಥಿಲಃ) ಕಾಶಿ,
ಸಾಹಿತ್ಯಪರಿಷದುಪಸಭಾಪಃ



---

ಸತ್ಯಧ್ಯಾನ ಸುತೀರ್ಥ ತಾವಕಮಿದಂ ಚಿತ್ರಂ ಚರಿತ್ರಂ ವಿಭೋ
ಕಾವ್ಯಾಲಾಪ ವಿವೇಚಿನೋಽಪಿ ಕವಯಃ ಶಕ್ತಾನವಕ್ತುಂ ಧಿಯಾ ।
ತಾಃ ಶಬ್ದಬ್ರಹ್ಮಭವಪ್ರಪಂಚವಿಷಯೇ ಸಂಚಿಂತಯಂತೋಮುದಾ
ಹ್ಯೌಪಮ್ಯಾನವಬೋಧ ಹೀನಮತಿತಾವಿಭ್ರಾಂತ ಭಾಜೋನೃಣಾಂ । ೧೦
ವಾದೇಚಸಾರ್ಧಂ ನಹಿತೇನಕೋಽಪಿ ಶಕ್ತೋಬುಧಸ್ಸ್ಯಾದಿತಿಮೇಮನೀಷಾ
ವಿಸ್ಮೇರತಾಮಾಪ ಯತಸ್ಸಧೀಮಾನ್ ಕುಮಾರಮಿಶ್ರಶ್ಶಿವಶಬ್ದಪೂರ್ವಃ ॥ ೧೧

ಕಾಶೀಸ್ಥರಾಜಕೀಯ-ವಿದ್ಯಾಲಯೇ ಧರ್ಮಶಾಸ್ತ್ರ ಪ್ರಧಾನಾಧ್ಯಾಪಕಸ್ಯ
ಮಹಾದೇವಶಾಸ್ತ್ರಿಣಃ.

# ಶುದ್ಧಿ ಪತ್ರಿಕೆಯು.

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| | | ಜಡ್ಜಮೆಂಟು ಭಾಗ. | |
| 2 | 18 | ಶೆಕ್ಷನ್ | ಶರ್ಕಷನ್ |
| 7 | 23 | ನಸ್ಯೈಃ | ನಸ್ಯೈ |
| 7 | 24 | ತಧಾ | ತಥಾ |
| 7 | 29 | ತೇಂಬ್ರ | ತೇ। ಬ್ರ |
| 7 | 29 | ಒಸ್ವ | ಒಸ್ತ್ಯ |
| 12 | 16 | ಶೂನ್ಯಪು | ಶೂನ್ಯವು |
| 13 | 26 | ಅದದ್ದಂಮ | ಆದದ್ದಂವು |
| | | ವಿಚಾರಣೆ ಭಾಗವು. | |
| 1 | 19 | ಸಿದ್ದಿ | ಸಿದ್ಧಿ |
| 3 | 15 | ತಿಂದು | ತಂದು |
| 4 | 6 | ಕುಮಾರನ | ಕುಮಾರರ |
| 4 | 21 | ಕೂಡಲಿ | ಕೋಡಲಿ |
| 4 | 26 | ಚಾರ್ತ್ಯಾರ | ಚಾರ್ತ್ಯಾದ |
| 4 | 29 | ಭ್ರಮುಶ್ಯೈ | ಭ್ರಮುಣ್ಯೈಃ |
| 4 | 30 | ನಿಭಯೋ | ನಿರ್ಭಯೋ |
| 7 | 29 | ಮಾಯು | ಮಾಯಾ |
| | | ಯಾಯುದ | ವಾದಪು |
| 8 | 2 | ನಗುರ್ಣ | ನಿರ್ಗುಣ |
| 8 | 29 | ಪ್ರವರ್ತಿಗ | ಪ್ರವರ್ತಿತ |
| 12 | 31 | ನ್ನುವುದನ್ನುವೆ | ವೆನ್ನುವುದನ್ನ |
| 15 | 28 | ನಾಸ್ತಿ | ನ್ನಾಸ್ತಿ |
| 16 | 17 | ಆವರ | ಅವರ |
| 17 | 18 | ಸಾಸ್ತಿಕ | ನಾಸ್ತಿಕ |
| 20 | 8 | ಸತ್ಯಸ್ವ | ಸತ್ಯತ್ವ |
| 20 | 22 | ವಾದದ್ನು | ವಾದದ್ದು |
| 20 | 22 | ಸಿದಿ | ಸಿದ್ಧಿ |
| 21 | 14 | ಧರ್ಮಪು | ಧರ್ಮವು |
| 21 | 25 | ಬಾರ್ಯರ | ಚಾರ್ಯರ |
| 23 | 24 | ಭಾವಪು | ಭಾವವು |
| 24 | 17 | ಶೂನ್ಯೆ | ಶೂನ್ಯತಿ |
| 26 | 15 | ಕೊಡುತ್ತದೆ | ಕೂಡುತ್ತದೆ |
| 27 | 8 | ತಿಳಿಸು | ತಿಳಿಸಿ |
| 43 | 24 | ಪದಾಧರ್ | ಪದಾರ್ಥ |
| 43 | 25 | ಇದ | ಇದ್ದ |
| 47 | 20 | ವಿಜಾನವು | ವಿಜ್ಞಾನವು |
| 49 | 20 | ಜತಿಕಾಟ | ಓತಿಕಾಟ |
| 53 | 16 | ಅಧಾಷ್ಟನ | ಅಧಿಷ್ಠಾನ |
| 56 | 24 | ಆದ್ವೈತ | ಅದ್ವೈತ |
| 60 | 4 | ವೈಭಾಷಿತಿ | ವೈಭಾಷಿಕ |

ಇವುಗಳಲ್ಲದೇ ಮುದ್ರಣದಲ್ಲಿ ಏನಾದರು ಅಶುದ್ಧಗಳಿದ್ದರೆ ಅವುಗಳನ್ನು ಸರಿಪಡಿಸಿಕೊಂಡು ಓದಿಕೊಳ್ಳತಕ್ಕದ್ದು.

# ವಿಷಯಾನುಕ್ರಮಣಿಕಾ.

ವಿಷಯಗಳು. ಪುಟ.

ಜಡ್ಜಮೆಂಟು ಭಾಗ.



ವಿಚಾರಣೆ ಭಾಗವು.

॥ ಶ್ರೀ ॥

ಶ್ರೀಮದ್ದಿಗ್ವಿಜಯ ರಾಮೋಪಿಜಯತಿ.

# ಉಪೋದ್ಘಾತವು.

" ಸುಖಮೇವಮೇಸ್ಯಾತ್ ದುಃಖಂಮನಾಗಪಿಮಾಭೂತ್ "

ಸುಖವೇ ಸರ್ವಕಾಲದಲ್ಲಿಯು ನಮಗೆ ಆಗತಕ್ಕದ್ದು. ದುಃಖವು ಯಾವಾಗಲೂ ಆಗಬಾರದುಯೆಂದು ಸಮಸ್ತ ಪ್ರಾಣಿಗಳಿಂದ ಅಪೇಕ್ಷಿಸಲ್ಪಡುವ ದುಃಖರಹಿತವಾದ ಸುಖವು ಮೋಕ್ಷದಲ್ಲಿಯೇ ಸಿಗತಕ್ಕದ್ದು. ಆಮೋಕ್ಷಕ್ಕೆ ಶ್ರೀಪರಮಾತ್ಮನ ಪ್ರಸಾದವೇ ಮುಖ್ಯಕಾರಣವು. ಆಪ್ರಸಾದಕ್ಕೆ ತನ್ನಲ್ಲಿಯೂ ತನ್ನವರಲ್ಲಿಯೂ ಮಾಡುವ ಸ್ನೇಹದಕಿಂತ ಅನೇಕ ಗುಣಗಳಿಂದ ಅಧಿಕವಾಗಿರುವ, ಎಷ್ಟು ವಿಘ್ನಗಳು ಬಂದರು ಪ್ರತಿಬದ್ಧವಾಗದಿರುವ, ನಿಷ್ಕಾಮವಾದ ಸ್ನೇಹರೂಪವಾದ ಭಕ್ತಿಯು ಕಾರಣವು. ಅಂಥಾಭಕ್ತಿ ವುಂಟಾಗುವದಕ್ಕೆ ಪರಮಾತ್ಮನ ಸರ್ವಜ್ಞತ್ವವು, ಸತ್ಯಜಗತ್ಕರ್ತೃತ್ವವು, ಪಾಲಕತ್ವವು, ಜೀವಜಡಾತ್ಮಕಪ್ರಪಂಚಭಿನ್ನತ್ವವು, ಮೊದಲಾದ ಅನೇಕ ಗುಣಗಳ ಅಪರೋಕ್ಷ ಜ್ಞಾನವು ಕಾರಣವು. ಅಂಥಾ ಅಪರೋಕ್ಷ ಜ್ಞಾನವು ವೇದಾದಿ ಶಾಸ್ತ್ರಗಳನ್ನು, ಶ್ರವಣಮಾಡಿ, ನಾನಾವಿಧ ದುರ್ಮತಗಳನ್ನು ಕೇಳುವದರಿಂದ ವುಂಟಾಗುವ ಸಂಶಯಗಳನ್ನು ಬ್ರಹ್ಮಮೀಮಾಂಸಾ ಶಾಸ್ತ್ರಗಳಲ್ಲಿ ಹೇಳಲಪಟ್ಟಿರುವ ಯುಕ್ತಿಗಳಿಂದ ನಿವೃತ್ತಿಮಾಡಿಕೊಂಡು ವೇದಗಳಿಂದ ಆತತ್ವಗಳ ನಿಶ್ಚಯಜ್ಞಾನವನ್ನು ಹೊಂದಿದಮೇಲೆ ಆಶಾಸ್ತ್ರಗಳಿಂದೆ ನಿರ್ಣಯಿಸಲ್ಪಟ್ಟ, ಭಗವದ್ಗುಣಗಳ ಧ್ಯಾನದಿಂದ ಆಗುತ್ತದೆ, ಅಂಥಾಧ್ಯಾನಕ್ಕೆ ಕಾರಣವಾದ ಶಾಸ್ತ್ರ ಶ್ರವಣಾದಿಗಳು, ಬ್ರಾಹ್ಮಣಾದಿವರ್ಣಗಳು ಬ್ರಹ್ಮಚರ್ಯಾದ್ಯಾಶ್ರಮಗಳು ಇವುಗಳಿಗೆ ವೇದದಿಂದ, ವಿಹಿತವಾದ ಸ್ನಾನ, ಸಂಧ್ಯಾ, ವೇದಾಧ್ಯಯನ, ಯಜ್ಞ,ಜಪ, ದೇವತಾರ್ಚನ ಗಂಗಾದಿ ತೀರ್ಥಸ್ನಾನ ಇವೇ ಮೊದಲಾದ ಸತ್ಕರ್ಮಗಳನ್ನು ಮಾಡಿ ಅವಗಳಿಂದ ಅಂತಃಕರಣಶುದ್ಧಿಯನ್ನು ಸಂಪಾದಿಸುಕೊಂಡಿರುವಮನುಷ್ಯನಿಗೆ ಸಾಧ್ಯವಾಗುತ್ತದೆಂಬ ಪ್ರಮೇಯವು ವೇದ ಸೂತ್ರ ಗೀತಾ ಇವಗಳಲ್ಲಿ ಹೇಳಲ್ಪಟ್ಟಿದೆ. ಹೀಗೆ ಇದ್ದರೂ ಗೌಡಪಾದಾಚಾರ್ಯರು, ಶಂಕರಾಚಾರ್ಯರು ಮೊದಲಾದ ಅದ್ವೈತಿಗಳು ವೇದ ಸೂತ್ರ ಗೀತಾ ಇವುಗಳಗೆ ಬೇರೆಅರ್ಥವನ್ನು ಕಲ್ಪನೆಮಾಡಿ ಬ್ರಾಹ್ಮಣಾದಿವರ್ಣ ಮೊದಲಾದ ಜಗತ್ತು ಮಿಥ್ಯಾ (ಸುಳ್ಳು) ಜೀವನು ಬ್ರಹ್ಮನೇ ಬ್ರಹ್ಮನು ಸರ್ವಜ್ಞತ್ವಾದಿ ಗುಣಗಳಿಂದ ಯುಕ್ತನಲ್ಲ. ಬೌದ್ಧರ ಶೂನ್ಯದಂತೆಯೂ ವಿಜ್ಞಾನದಂತೆಯೂ ಬ್ರಹ್ಮನು ನಿರ್ವಿಶೇಷನು (ಸಕಲಧರ್ಮರಹಿತನು) ವೇದವು ಅಪ್ರಮಾಣವು ಎಂದು ಹೇಳಿ ಬೌದ್ಧಮತಕ್ಕೆ ಅದ್ವೈತಮತವೆಂದು ಹೆಸರಿಟ್ಟು ವೈದಿಕಮತವೆಂದು ತೋರುವಂತೇಮಾಡಿ ಸಜ್ಜನರಿಗೆ ಭ್ರಮವನ್ನು ಹುಟ್ಟಿಸಿ ಅವರನ್ನು ಅಧೋಗತಿಗೆ ಕರದೊಯ್ಯುತ್ತಿರಲು "ಮಧ್ವೋಮೋನಾಮ ಮಾರುತಂಯುಜತ್ರಾಃ" (ಋ) ಇತ್ಯಾದಿ ವೇದಗಳಿಂದ ವಾಯ್ವವತಾರವೆಂದು ಪ್ರಸಿದ್ಧಿಹೊಂದಿರುವ ಶ್ರೀಮರ್ಮ ಮಧ್ವಾಚಾರ್ಯರು, ಶ್ರೀಪದ್ಮನಾಭತೀರ್ಥರು,

ಶ್ರೀಮಟ್ಟೀಕಾಕೃತ್ಪಾದರು, ಶ್ರೀವ್ಯಾಸರಾಯರು ಶ್ರೀಮದ್ವಿದ್ಯಾಧೀಶತೀರ್ಥರು, ಶ್ರೀಸತ್ಯನಾಥತೀರ್ಥರು, ಪಾಂಡುರಂಗೀ ಕೇಶವಾಚಾರ್ಯರು, ಯಾದವಾಚಾರ್ಯರು ಮೊದಲಾದ ಮಹನೀಯರು ಆ ಅದ್ವೈತಮತವನ್ನು ಖಂಡಿಸಿ ದ್ವೈತಮತವನ್ನು ಸ್ಥಾಪನಮಾಡಿದ್ದಾರೆ. ಆಗ್ರಂಥಗಳು ಸಂಸ್ಕೃತಭಾಷೆಯಲ್ಲಿ ಅತಿ ಪ್ರೌಢವಾಗಿ ಇರುವವು. ಆ ಗ್ರಂಥಗಳಲ್ಲಿ ಹೇಳಲ್ಪಟ್ಟಿರುವ ವಿಷಯಗಳು ಸಜ್ಜನರಿಗೆ ಸುಲಭವಾಗಿ ತಿಳಿಯೋದಕ್ಕಾಗಿ ಶ್ರೀಮದುತ್ತರಾದಿಮಠಾಧೀಶ ಶ್ರೀಮತ್ಸತ್ಯ ಧ್ಯಾನ ತೀರ್ಥ ಶ್ರೀಪಾದಂಗಳವರಿಂದ ಸುಲಭ ಸಂಸ್ಕೃತಭಾಷೆಯಲ್ಲಿ ಯಲ್ಲಾ ವಿಷಯಗಳನ್ನು ಏಕತ್ರ ಸಂಗ್ರಹಿಸಿ ಅನೇಕಗ್ರಂಥಗಳು ಬರಿಯಲ್ಪಟ್ಟಿರುವದಲ್ಲದೇ ಈಕಾಲದಲ್ಲಿ ನಡಿಯುವ ಕೋರ್ಟುವಿಚಾರಣ ಶೈಲಿಯಲ್ಲಿ ಅರ್ಜಿ, ಸ್ಟೇಟುಮೆಂಟು, ಇಸ್ಯೂ, ವಾದಿಪ್ರತಿವಾದಿಗಳ ವಿಚಾರಣೆ, ಕ್ರಾಸು ರೀಕ್ರಾಸು ವಾದಿ ಪ್ರತಿವಾದಿ ವಕೀಲರಗಳ ಆರ್ಗ್ಯುಮೆಂಟು, ಜಡ್ಜಿಮೆಂಟು ಇರೀತಿ ವೇದಾಂತವಿಷಯುಗಳನ್ನು ತಿಳುಸುವ ಗ್ರಂಥವು ಬರೆಯಲ್ಪಟ್ಟಿರುವದು. ಆ ಗ್ರಂಥದ ಪ್ರಥಮಭಾಗದಲ್ಲಿ ದಾವೇ ರೆಸ್‌ಜುಡಿಕೇಟಾ ಅಲ್ಲವೆಂತಲೂ ಎರಡನೇ ಭಾಗದಲ್ಲಿ ಬ್ರಾಹ್ಮಣವರ್ಣ ಮೊದಲಾದ ಜಗತ್ತು ಸತ್ಯ ಮಿಥ್ಯಾ ಅಲ್ಲವೆಂತಲೂ, ಮೂರನೇಭಾಗದಲ್ಲಿ ಬ್ರಹ್ಮನು ಜೀವನದಸೆಯಿಂದಭಿನ್ನನು, ಜೀವರೂಪನಲ್ಲವೆಂತಲೂ, ನಾಲ್ಕನೇಭಾಗದಲ್ಲಿ ಬ್ರಹ್ಮನು ಸರ್ವಜ್ಞತ್ವ, ಜಗತ್‌ಕರ್ತೃತ್ವಾದಿ ಅನೇಕ ಗುಣಗಳಿಂದ ಪೂರ್ಣನು. ನಿರ್ಗುಣನಲ್ಲವೆಂತಲೂ, ಐದನೇಭಾಗದಲ್ಲಿ ಅದ್ವೈತಮತವು ಬೌದ್ಧಮತವೇ ಎಂತಲೂ ಸ್ಪಷ್ಟಮಾಡಲ್ಪಟ್ಟಿರುವದು. ಅಂಥಾಗ್ರಂಥವನ್ನು ಈಕಾಲದಲ್ಲಿ ಸಕಲ ಲೌಕಿಕ ವೈದಿಕಸಜ್ಜನರಿಗೆ ಸುಲಭವಾಗಿತಿಳಿಯುವದಕ್ಕಾಗಿ ಕರ್ನಾಟಕ, ಆಂಧ್ರ, ದ್ರಾವಿಡ ಮಹಾರಾಷ್ಟ್ರ, ಹಿಂದೀ ಮೊದಲಾದ ಭಾಷೆಗಳಲ್ಲಿ ತರ್ಜಿಮು ಮಾಡಿಸ ಶ್ರೀಮನ್ಮಧ್ವ ಸಿದ್ಧಾಂತಾಭಿವೃದ್ಧಿಕಾರಿಣಿ ಸಭೆಯುವರಿಂದ ಪ್ರಚುರಪಡಿಸಲ್ಪಟ್ಟಿರುವದು. ಈಗ್ರಂಥದಲ್ಲಿ ಬಂಯುಲವಟ್ಟಿರುವ ವಿಷಯುಗಳು ಶಾಸ್ತ್ರ ವಿಚಾರರೂಪವಾಗಿರುವದರಿಂದ ಕಠಿಣವಾಗಿರುವದು ಆದ್ದರಿಂದ "ವಕ್ತವ್ಯಂ ಬ್ರಹ್ಮಗುರುಣಾ ಚತುರ್ವರ್ಣದಮಥಾಪಿವಾ"ಎಂಬ ಆಚಾರ್ಯರ ಆಜ್ಞೆಯನ್ನುಅನುಸರಿಸಿ ಸಜ್ಜನರಿಗೆ ಸುಲಭವಾಗಿ ತೆಳಿಯುವದಕ್ಕೋಸ್ಕರ ಅನೇಕ ಸ್ಥಳಗಳಲ್ಲಿ ಆನೇಕ ಪ್ರಕಾರವಾಗಿ ಬರಿಯುಲ್ಪಟ್ಟಿರುವದು. ಇಂಥಾ ಗ್ರಂಥವನ್ನು ಸಜ್ಜನರು ನೆಟ್ಟಗೆ ಮನಃಸಮಾಡಿ ಬ್ರಹ್ಮನ ಸರ್ವಜ್ಞತ್ವವು ಸತ್ಯವಾದಜಗತ್ಸ್ರಷ್ಟತ್ವವು, ಜೀವ ಜಡಾತ್ಮಕ ಪ್ರಪಂಚ ವಿಲಕ್ಷಣ್ವವು ಇವೇ ಮೊದಲಾದ ಮಹಾತ್ಮ್ಯೆಗಳನ್ನು ತಿಳಿದು ಪರಮಾತ್ಮನ ಅನುಗ್ರಹದಿಂದ ಪ್ರಕೃತಿಬಂಧದ್ವಸಿಯಿಂದ ಮುಕ್ತರಾಗಿ ನಿತ್ಯಸುಖವನ್ನು ಅನುಭವಿಸ ತಕ್ಕದ್ದು.

ಪದ್ಮಸರೋವರ.
ಶ್ರೀಭಾವ ಸಂ॥
ಚೈತ್ರಶುದ್ಧ ನವಮಿ.
೨೪–೩–೧೯೩೪.

ಗೌರವ ಕಾರ್ಯದರ್ಶಿ,
ಶ್ರೀಮನ್ಮಧ್ವ ಸಿದ್ಧಾಂತಾಭಿವೃದ್ಧಿ ಕಾರಿಣೀಸಭಾ.

ಶ್ರೀ

# ಸಂಯಮನೀಪುರದ ಹೈಕೋರ್ಟ್

ಇಪ್ಪತ್ತೆಂಟನೆಯ ಕಲಿಯುಗದ ಶಾಲಿವಾಹನಶಕ ೧೮೪೯

ಚೀಫ್ ಜಸ್ಟಿಸ್ ಧರ್ಮರಾಜ ಹೆಚ್. ಬಿ. ಇವರ ಸಮುಖದಲ್ಲಿ ನಡೆದ

ವೇದಾಂತವಿಚಾರಣೆ

# ಸಿವಿಲ್ ಸೂಟ್.

5-ನೆ ಇಸ್ಯೂ.

O. S. No. 564 of 1927.

ಜಡ್ಜ ಮೆಂಟ್ (ತೀರ್ಮಾನ).

ವಾದಿ:- ಸತ್ಯಬೋಧಾಚಾರ್ಯ alias ವಿಷ್ಣುದಾಸಾಚಾರ್ಯ.
ವಕೀಲ:- ಮಾಧವದಾಸ, P. B. D.

ಪ್ರತಿವಾದಿ:- ಗಂಗಾಧರಶಾಸ್ತ್ರಿ.
ವಕೀಲ - ಹರಿಹರಶರ್ಮ P. B. S.

ವಾದಿಯ ದಾವೆ ಹೀಗೆ ಇದೆ:-

೧. ವಾದಿಯು ವೈದಿಕ ಆಸ್ತಿಕಸಮಾಜದ ಪ್ರತಿನಿಧಿಯೆಂದು ಕೋರ್ಟಿನ ಆಜ್ಞೆಯನ್ನು ಪಡೆದು ಈ ದಾವೆಯನ್ನು ಹಾಕಿದ್ದಾನೆ. (ದಾಖಲಮಾಡಿದ್ದಾನೆ).

೨. ಈದಾವೆಯಲ್ಲಿ ಗಂಗಾಧರ ಶಾಸ್ತ್ರಿಗಳೆಂಬುವರನ್ನು ಕೋರ್ಟಿನ ಆಜ್ಞೆಯನ್ನುಪಡೆದು ಅದ್ವೈತಸಮಾಜದ ಪ್ರತಿನಿಧಿಯಾಗಿ ಪ್ರತಿವಾದಿ ಎಂದುಮಾಡಿದೆ

೩. ವಾದಿಯು ಆಸ್ತಿಕ ವೈದಿಕಮತಕ್ಕೆ ಸಂಬಂಧಿಸಿದವನಿದ್ದಾನೆ.

೪. ವೈದಿಕಮತದ ತತ್ವಗಳು:-

(ಅ) ಬ್ರಾಹ್ಮಣಾದಿ ವರ್ಣ, ಬ್ರಹ್ಮಚರ್ಯಾದ್ಯಾಶ್ರಮ, ಯಜ್ಞಾದಿಕ್ರಿಯಾ ದೇವತಾ, ವೇದ, ಗಂಗಾದಿತೀರ್ಥಗಳು, ಸ್ವರ್ಗಾದಿ ಪರಲೋಕ ಈಲೋಕ ಇತ್ಯಾದಿ ಸಮಸ್ತ ಜಗತ್ತೂ ಸತ್ಯವಾದುದು.

(ಬ) ಪರಬ್ರಹ್ಮನು (ವಿಷ್ಣುವು) ಸರ್ವೋತ್ತಮನು, ಸರ್ವಜ್ಞನು ಸರ್ವಕರ್ತನು ಅನಂತ ಕಲ್ಯಾಣಗುಣಗಳಿಂದ ಪರಿಪೂರ್ಣನು.

(ಕ) ಪರಮಾತ್ಮನು ಜೀವನ ದಸೆಯಿಂದ ಬೇರೆ (ಭಿನ್ನನು).

(ಡ) ಪರಮಾತ್ಮನು ಸರ್ವೋತ್ತಮನು, ಸರ್ವಕರ್ತನು, ಜೀವನ ದಸೆಯಿಂದ ಭಿನ್ನನು ಎಂಬ ಜ್ಞಾನವೆ ಮೋಕ್ಷಕ್ಕೆ ಸಾಧನವು.

೫. ಈ ತತ್ವಗಳು ವೇದಗಳಲ್ಲಿಯೂ, ವೇದಾರ್ಥನಿರ್ಣಾಯಕಗಳಾದ ಬ್ರಹ್ಮಸೂತ್ರಗಳಲ್ಲಿಯೂ, ಮತ್ತು ಶ್ರೀಮದ್ಭಗವದ್ಗೀತೆಯಲ್ಲಿಯೂ ಉಕ್ತವಾಗಿವೆ ಯಾದುದರಿಂದ ಸಮಸ್ತ ವೈದಿಕಜನರು ಈತತ್ವಗಳನ್ನು ಅಂಗೀಕಾರ ಮಾಡಲು ಬದ್ಧರಿದ್ದಾರೆ.

೬. ಈವೈದಿಕಮತವು ಅನಾದಿಕಾಲದಿಂದಲೂ ನಡೆದು ಬಂದಿದೆ.

೭. ತತ್ವಗಳ ವಸ್ತುಸ್ಥಿತಿ ಹೀಗೆ ಇದ್ದರೂ, ಗೌಡಪಾದಾಚಾರ್ಯ, ಅವರ ಪರಮಶಿಷ್ಯರಾದ ಶಂಕರಾಚಾರ್ಯ ಇವರು ವೇದ, ಬ್ರಹ್ಮಸೂತ್ರ, ಗೀತೆ ಇವುಗಳಿಗೆ ಬೇರೆ ಅರ್ಥವನು ಕಲ್ಪಿಸಿ, ಶೂನ್ಯವಾದಿಗಳಾದ ಬೌದ್ಧರ ಮತಕ್ಕೆ ವಿಜ್ಞಾನವಾದಿಗಳಾದ ಬೌದ್ಧರ ಮತಕ್ಕೆ ವೈದಿಕಮತದ ವೇಷವನ್ನು ಕೊಟ್ಟು, ಅದ್ವೈತ ಮತವೆಂತ ಹೆಸರು ಇಟ್ಟು ಅದನ್ನು ವೈದಿಕಮತದಂತೆ ಭಾಸವಾಗುವ ·ಹಾಗೆ ಮಾಡಿ ಜನರನ್ನು ಮರುಳುಗೊಳಿಸಿ ವೈದಿಕ ತತ್ವಗಳಿಗೆ ವಿರುದ್ಧವಾದ ತತ್ವಗಳನ್ನು ಉಪದೇಶಮಾಡಿದ್ದಾರೆ.

ಹೀಗೆ ಮಾಡಿದುದು ಪ್ರಾಚೀನ ಶಿಕ್ಷಾನಿಯಮ, ಭಗವದ್ಗೀತಾ ಸೆಕ್ಷನ್, (ಅಧ್ಯಾಯ) ೧೬ ಇವುಗಳಲ್ಲಿ ಉಕ್ತವಾದ ಪ್ರಕಾರ ಶಿಕ್ಷೆಗೆ ಯೋಗ್ಯವಾದ ಅಪರಾಧವಾಗುತ್ತದೆ.

೮. ಪ್ರತಿವಾದಿಯಾದ ಅದ್ವೈತಿಯು ಹೀಗೆ ಉಪದೇಶಮಾಡುತ್ತಾನೆ:—

(ಅ) ವಿಷ್ಣುವು (ಪರಬ್ರಹ್ಮ) ಸರ್ವೋತ್ತಮನಲ್ಲ, ಸರ್ವಜ್ಞನಲ್ಲ, ಸರ್ವಕರ್ತನೂ ಅನಂತಗುಣ ಪರಿಪೂರ್ಣನೂ ಅಲ್ಲ. ಅವನು ಸರ್ವಧರ್ಮಗಳಿಂದ ರಹಿತನಾಗಿದ್ದಾನೆ.

(ಬ) ಮೇಲೆ ನಾಲ್ಕನೆಯ (ಅ) ವಿಭಾಗದಲ್ಲಿ ಉಕ್ತವಾದ ಬ್ರಾಹ್ಮಣಾದಿ ಸರ್ವಜಗತ್ತು ಮಿಥ್ಯಾ (ಮೂರುಕಾಲಗಳಲ್ಲಿಯೂ ಇಲ್ಲದುದು).

(ಕ) ಪರಮಾತ್ಮನು ಜೀವನ ದಸೆಯಿಂದ ಭಿನ್ನನಲ್ಲ.

(ಡ) ಪರಮಾತ್ಮನು ಜೀವನ ದಸೆಯಿಂದ ಭಿನ್ನನು, ಸರ್ವೋತ್ತಮನು ಎಂಬ ಜ್ಞಾನವು ಮೋಕ್ಷಕ್ಕೆ ಸಾಧನವಲ್ಲ. "ಅಹಂ ಬ್ರಹ್ಮಾಸ್ಮಿ" (ನಾನೇ ಬ್ರಹ್ಮ) ಎಂಬ ಈ ಜ್ಞಾನವೇ ಮೋಕ್ಷಕ್ಕೆ ಸಾಧನವು.

೯. ಹೀಗೆ ವೇದ,ಸೂತ್ರ,ಗೀತಾ ಇವುಗಳಲ್ಲಿ ಹೇಳಿದ ತತ್ವಗಳನ್ನು ವಿರುದ್ಧವಾಗಿ ತಿಳಿದು "ನಷ್ಟಾತ್ಮಾನೋಽಲ್ಪಬುದ್ಧಯಃ । ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥" (ಗೀತಾ ಅ. ೧೬ ಶ್ಲೋಕ ೯) ರಲ್ಲಿ ಹೇಳಿದ ಪ್ರಕಾರ ತಾವೊಬ್ಬರೇ ಅಧೋಗತಿಯನ್ನು ಹೊಂದುವದಲ್ಲದೇ ಬೇರೆ ಸಜ್ಜನರನ್ನಾ ಆಸ್ತಿಕಮತದಿಂದ ಬಿಡಿಸಿ ಅವೈದಿಕಮತವನ್ನು ಆಶ್ರಯಿಸುವಂತೆ ಮಾಡಿ ಅವರನ್ನಾ ಅಧೋಗತಿಗೆ ಹೋಗುವಂತೆ ಮಾಡಿದ್ದಾರೆ.

ಆದುದರಿಂದ ಸಜ್ಜನರ ಕ್ಷೇಮಕ್ಕೋಸ್ಕರ ಕೆಳಗೆ ಹೇಳಿದಪ್ರಕಾರ ತೀರ್ಮಾನಿಸಬೇಕೆಂದು ಕೋರ್ಟಿಗೆ ವಿಜ್ಞಾಪಿಸಿ ಕೊಳ್ಳುತ್ತೇವೆ.

(೧) ಪರಬ್ರಹ್ಮನು ಜೀವನ ದಸೆಯಿಂದ ಭಿನ್ನನೂ, ಸರ್ವೋತ್ತಮನೂ ಇದ್ದಾನೆ. ಬ್ರಾಹ್ಮಣಾದಿವರ್ಣ, ಬ್ರಹ್ಮಚರ್ಯಾದ್ಯಾಶ್ರಮ, ವೇದ, ಯಜ್ಞ, ದೇವತಾ ಗಂಗಾದಿತೀರ್ಥ, ಇವೇ ಮೊದಲಾದ ಜಗತ್ತು ಸತ್ಯ, ಮಿಥ್ಯಾ ಅಲ್ಲ ಎಂಬುವದೇ ವೈದಿಕಮತದ ತತ್ವವು. ಬ್ರಹ್ಮನು ನಿರ್ಗುಣನು, ಜೀವನಿಂದ, ಅಭಿನ್ನನು, ಬ್ರಾಹ್ಮಣವರ್ಣಾದಿ ಜಗತ್ತುಮಿಥ್ಯಾ, ಎಂಬುವದು ವೈದಿಕಮತದ ತತ್ವಗಳಲ್ಲ.

(೨) ವೇದ, ಬ್ರಹ್ಮಸೂತ್ರ, ಗೀತಾ ಇವುಗಳಿಗೆ ವಿರುದ್ಧಾರ್ಥವನ್ನು ಕಲ್ಪಿಸಿ ಜಗತ್ತು ಸುಳ್ಳು, ಬ್ರಹ್ಮನು ನಿರ್ಗುಣನು, ಇತ್ಯಾದಿ ಪ್ರತಿವಾದಿಯ ಉಪದೇಶವು ಶಾಸ್ತ್ರಕ್ಕೆ ವಿರುದ್ಧವಾದದು.

(೩) ಈ ಪ್ರಕಾರ ತೀರ್ಮಾನವನ್ನು ಕೊಡಿಸಬೇಕು. ಇವುಗಳ ಹೊರ್ತು ಕೋರ್ಟಿಗೆ ಯುಕ್ತವೆಂದು ತೋರಿದ್ದೆಲ್ಲವನ್ನಾ ಅಪ್ಪಣೆ ಕೊಡಿಸಬೇಕು.

೪. ಕೋರ್ಟಿನವರು ಈ ಬಗೆಯಾಗಿ ಹುಕುಂ ಮಾಡದಿದ್ದರೆ ಜನರು ಬಹಳ ದುಃಖಭಾಗಿಗಳಾಗುತ್ತಾರೆ.

ಹೀಗೆ೨೫-೩-೧೯೨೭ ನೇ ದಿವಸ ಮಾಧವದಾಸ ವಕೀಲ ಇವರ ದ್ವಾರಾ ದಾವೆ ದಾಖಿಲ್ ಮಾಡಿಸಿ ವಾದಿಯು ಪ್ರತಿಜ್ಞಾ ಲೇಖವನ್ನು ಮಾಡಿದ್ದಾನೆ.

ಆ ಮೇಲೆ ಪ್ರತಿವಾದಿಯ ಹೆಸರಿನಲ್ಲಿ ಸಮನ್ಸ್ ಹೊರಡಲು ಪ್ರತಿವಾದಿಯು ೩೦-೩-೧೯೨೭ ನೇಯ ದಿವಸ ಕೆಳಗೆ ಕಾಣಿಸಿದಂತೆ ಸ್ಟೇಟಮೆಂಟ ಕೊಟ್ಟದ್ದಾನೆ.



## ಪ್ರತಿವಾದಿಯ ಸ್ಟೇಟಮೆಂಟು.

೧. ವಾದಿಯು ತನ್ನ ಅರ್ಜಿಯಲ್ಲಿ ಬರಕೊಂಡುದೆಲ್ಲವು ಸುಳ್ಳು.

೨. ವಾದಿಯಮತವು ಅನಾದಿಕಾಲದಿಂದ ಬಂದದ್ದು ಅಲ್ಲ.

೩. ವಾದಿಯು ನಾಲ್ಕನೆಯ ವಿಭಾಗದಲ್ಲಿ ಹೇಳಿದ ತತ್ವಗಳು ಸುಳ್ಳು.

೪. (ಅ)ನಮ್ಮ ಅದ್ವೈತಮತವೇ ವೈದಿಕವಾದುದು.

(ಬ) ಅದ್ವೈತಮತವು ಬೌದ್ಧಮತವೆಂದು ಹೇಳುವುದು ಅಯುಕ್ತವು.

(ಕ) ಪ್ರತಿವಾದಿಯು ಹೇಳುವುದೇ ವೇದಾರ್ಥವು.

೪. ಅದ್ವೈತಮತದ ತತ್ವಗಳು:—

(ಅ) ಬ್ರಹ್ಮಾತಿರಿಕ್ತವಾದ ಬ್ರಾಹ್ಮಣಾದಿವರ್ಣ, ದೇವತಾ, ಸಂಧ್ಯಾವಂದನಾದಿ ಕರ್ಮಗಳು ಇತ್ಯಾದಿ ಜಗತ್ತು ಸ್ವಪ್ನದಂತೆ ಅಸತ್ಯವಾದುದು.

(ಬ) ಪರಬ್ರಹ್ಮನು ನಿರ್ಗುಣನು (ಸಕಲ ಧರ್ಮರಹಿತನು).

(ಕ) ಜೀವ ಮತ್ತು ಬ್ರಹ್ಮ ಇವೆರಡು ಒಂದೇ.

(ಖ)"ಅಹಂಬ್ರಹ್ಮಾಸ್ಮಿ" ನಾನೇಬ್ರಹ್ಮಎಂಬೀಜ್ಞಾನವು ಮೋಕ್ಷಸಾಧನವು

೫. ಈವಿಷಯವು ಪೂರ್ವದಲ್ಲಿಯೇ ನಿರ್ಣೀತ ವಾಗಿದ್ದುದರಿಂದ ಪುನಃ ವಿಚಾರಮಾಡುವ ಅಧಿಕಾರವು ಕೋರ್ಟಿಗೆ ಇಲ್ಲ: (ರೆಸ್ ಜೂಡಿಕೇಟ) (Resjudicata) ಬಾಧಬರುತ್ತದೆ).

೬. ವಾದಿಯು ೯ ನೆಯ ವಿಭಾಗದಲ್ಲಿ ಹೇಳಿದುದು ತಪ್ಪು.

ಅದ್ವೈತಮತದ ಆಶ್ರಯದಿಂದ ನಮಗೆ ಯಾವನಷ್ಟವೂ ಆಗಿಲ್ಲ ಈಮತವನ್ನು ಅನುಸರಿಸಿದ ಬೇರೆ ಯಾರಿಗೂ ಯಾವನಷ್ಟವೂ ಆಗಿಲ್ಲ.

ಈಕಾರಣಗಳಿಂದ ಈ ವಿಷಯವಾಗಿ ಯಾವ ಬಗೆಯ ತೀರ್ಮಾನವನ್ನೂ ಕೊಡದೆ ವಾದಿಯ ಅರ್ಜಿಯನ್ನು ತೆಗೆದು ಹಾಗಬೇಕೆಂದು ಪ್ರಾರ್ಥನೆ.

ಹೀಗೆಂದು ಸ್ಟೇಟಮೆಂಟನ್ನು ವಕೀಲ ಹರಿಹರಶರ್ಮ ಇವರ ದ್ವಾರಾ ಕೋರ್ಟಿಗೆ ಕೊಟ್ಟು ಪ್ರತಿಜ್ಞಾಲೇಖವನ್ನು ಮಾಡಲಾಗಿದೆ.

ಇದರ ಮೇಲೆ ವಾದಿ ಪ್ರತಿವಾದಿ ವಕೀಲರ ಸಮಕ್ಷ ಮುಂದಿನ ಇಸ್ಯುಗಳು (Issues) ಗೊತ್ತು ಪಡಿಸುವದರಲ್ಲಿ ಬಂದವು.

ಇಷ್ಯೂ = (ವಾದಗ್ರಸ್ತ ವಿಷಯಗಳು.)

೧ ರೆಸ್‌ಜ್ಯುಡಿಕೇಟ (Resjudicata) ಉಂಟೋ ಇಲ್ಲವೋ ಅಂದರೆ ಈ ವಿಷಯದ ನಿರ್ಣಯವು ಪೂರ್ವದಲ್ಲಿ ಮಾಡಲ್ಪಟ್ಟಿರುವದರಿಂದ ಮತ್ತು ಕೋರ್ಟಿನವರು ವಿಚಾರಮಾಡುವದಕ್ಕೆ ಅಧಿಕಾರ ಉಂಟೇ, ಇಲ್ಲವೇ?

(೨ A) ಬ್ರಾಹ್ಮಣಾದಿವರ್ಣಗಳು, ಬ್ರಹ್ಮಚರ್ಯಾದ್ಯಾಶ್ರಮಗಳು ಮೊದಲಾದ ಎಲ್ಲ ಜಗತ್ತು ಸತ್ಯವೋ ಅಥವಾ ಮಿಥ್ಯೆಯೋ?

(B) ಸ್ವಪ್ನವು ನಿಜವೋ ಅಥವಾ ಸುಳ್ಳೊ?

(೩) ಪರಬ್ರಹ್ಮನು ಜೀವನದಸೆಯಿಂದ ಭಿನ್ನನೋ ಅಥವಾ ಅಭಿನ್ನನೋ?

(೪) ಪರಬ್ರಹ್ಮನು ಸರ್ವಜ್ಞತ್ವ, ಜಗತ್ಕರ್ತೃತ್ವ ಮೊದಲಾದ ಸಮಸ್ತ ಕಲ್ಯಾಣಗುಣಗಳಿಂದ ಪರಿಪೂರ್ಣನೋ, ಅಲ್ಲವೋ?

(೫ A) ಅದ್ವೈತಮತವು ಬೌದ್ಧಮತವಸೆಯಿಂದ ಭಿನ್ನವೋ, ಅಲ್ಲವೋ?

(B) ಅದ್ವೈತಮತವು ವೈದಿಕವೇ, ಅವೈದಿಕವೇ?



ಮೊದಲನೇ ಇಷ್ಯುವಿನ ವಿಚಾರಣೆಯನ್ನು ೩–೭–೨೭ ದಿನವಲ್ಲಿ ಉಭಯ ಪಕ್ಷಕಾರರ ವಕೀಲರಗಳ ಆರ್ಗುಮೆಂಟ ನಡೆದು ಈ ದಾವೆಯು ರೆಸ್‌ಜ್ಯುಡಿಕೇಟ ಅಲ್ಲವೆಂದು ತೀರ್ಮಾನ ಕೊಡಲ್ಪಟ್ಟಿದೆ.

(ಅ) ಬ್ರಾಹ್ಮಣಾದಿವರ್ಣ, ಬ್ರಹ್ಮಚರ್ಯಾದ್ಯಾಶ್ರಮ ಮುಂತಾದ ಸರ್ವ ಜಗತ್ತು ಸತ್ಯವೇ? ಅಥವಾ ಮಿಥ್ಯೆಯೇ?

(ಬ) ಸ್ವಪ್ನ ಪದಾರ್ಥಗಳು ಸತ್ಯವೇ? ಮಿಥ್ಯಾಭೂತವೇ ಎಂಬ ಎರಡನೇ ಇಷ್ಯೂ ವಿಚಾರವಾಗಿ ೨೮–೮–೧೯೨೮ ತಾರೀಖದಲ್ಲಿ ಬ್ರಾಹ್ಮಣವರ್ಣ ಮೊದಲಾದ ಜಗತ್ತು ಸತ್ಯವೆಂದು ಕೋರ್ಟಿನಿಂದ ನಿರ್ಣಯಿಸಲ್ಪಟ್ಟಿರುತ್ತದೆ.

ಬ್ರಹ್ಮನು ಜೀವನದಸೆಯಿಂದ ಭಿನ್ನನೋ? ಒಂದೇನೋ (ಜೀವಬ್ರಹ್ಮರಗಳಿಗೆ ಭೇದವೋ ಐಕ್ಯವೋ?) ಎಂಬ ೩ ನೆ ಇಷ್ಯು ವಿಚಾರಮಾಡಿ ಬ್ರಹ್ಮನು ಜೀವನದಸೆಯಿಂದ ಭಿನ್ನನು, ಜೀವಬ್ರಹ್ಮರಗಳಿಗೆ ಭೇದಉಂಟು ಐಕ್ಯವಿಲ್ಲ ಎಂದು ೨೧–೧೧–೧೯೨೮ ತಾರೀಖದಲ್ಲ ಕೋರ್ಟಿನಿಂದ ನಿರ್ಣಯಿಸಲ್ಪಟ್ಟಿದೆ

ಬ್ರಹ್ಮನು ಸರ್ವಜ್ಞತ್ವ, ಸರ್ವಶಕ್ತಿಮತ್ವ, ಜಗತ್ಕರ್ತೃತ್ವ ಮೊದಲಾದ ಗುಣಗಳಿಂದಯುಕ್ತನೋ ರಹಿತನೋ (ನಿರ್ಗುಣನೋ?) ಎಂಬ ೪ನೆ ಇಷ್ಯೂ ವಿಚಾರಣೆಯಾಗಿ ಬ್ರಹ್ಮನು ಸರ್ವಜ್ಞತ್ವ ಸರ್ವಶಕ್ತಿಮತ್ವ, ಜಗತ್ಕರ್ತೃತ್ವ, ಮೊದಲಾದ ಪಾರಮಾರ್ಥಿಕ ಸತ್ಯವಾದ ಗುಣಗಳಿಂದ ಯುಕ್ತನು. ಸಕಲ ಧರ್ಮರಹಿತನಲ್ಲ ಎಂದು ೨೮–೧೨–೧೯೨೮ ತಾರೀಖದಲ್ಲಿ ಕೋರ್ಟಿನಿಂದ ನಿರ್ಣಯಿಸಲ್ಪಟ್ಟಿದೆ.

ಈ ದಿವಸ ಅದ್ವೈತಮತವು ಬೌದ್ಧಮತದಿಂದ ಬೇರೆ ಆದದ್ದೋ ಅಥವಾ ಒಂದೇನೋ, ಅದ್ವೈತಮತವು ವೈದಿಕವೋ? (ವೇದದಿಂದ ಸಿದ್ಧವಾದದ್ದೋ) ಅಥವಾ ಅವೈದಿಕವೋ ವೇದದಿಂದಸಿದ್ಧವಾಗದೇ ವೇದಕ್ಕೆ ವಿರುದ್ಧ ವಾದದ್ದೋ ೫ ಇಷ್ಯೂವಿನ ಮೇಲೆ ವಿಚಾರಮಾಡಿ.

ಅದ್ವೈತಮತವು ಶೂನ್ಯವಾದಿಗಳಾದ ಬೌದ್ಧರಮತವು ಒಂದೇ ಎಂದು ಕೋರ್ಟಿನವರು ತೀರ್ಮಾನ ಮಾಡುತ್ತಾರೆ.

ಇದಕ್ಕೆ ಕಾರಣಗಳು.

| ಅದ್ವೈತಮತದ ತತ್ವಗಳು. | ಶೂನ್ಯವಾದಿ ಬೌದ್ಧರಮತ ತತ್ವಗಳು |
|---|---|
| ೧. ಬ್ರಹ್ಮನು ಸತ್ಯವಾದವನು, ಜ್ಞಾನರೂಪನು, ಆನಂದರೂಪನು, ನಿರ್ವಿಶೇಷನು, (ಸಕಲ ಧರ್ಮರಹಿತನು) ಅಜ್ಞೇಯನು, ಅವಾಚ್ಯನು. | ೧. ಶೂನ್ಯವು ನಿರ್ವಿಶೇಷವೂ, (ಸಕಲ ಧರ್ಮರಹಿತವು) ಸತ್ಯವಾದದ್ದು ಜ್ಞಾನರೂಪವು, ಆನಂದರೂಪವು, ಅಜ್ಞೇಯವು, ಅವಾಚ್ಯವು. |
| ೨. ವೇದ ದೇವತೆಗಳು, ಯಜ್ಞ, ಗಂಗಾದಿತೀರ್ಥ, ಬ್ರಾಹ್ಮಣಾದಿವರ್ಣ ಬ್ರಹ್ಮಚರ್ಯಾದ್ಯಾಶ್ರಮ, ಪರಲೋಕ ಮುಂತಾದ ಜಗತ್ತು ಶಶವಿಷಾಣದಂತೆ, ಮರುಮರೀಚಿಕೆಯಂತೆ, ಸ್ವಪ್ನದಂತೆ ಮಿಥ್ಯಾ ಅಸತ್ಯವಾದದ್ದು, ಬ್ರಹ್ಮನೊಬ್ಬನೇ ಪಾರಮಾರ್ಥಿಕ ಸತ್ಯನು. | ೨. ವೇದ, ದೇವತೆಗಳು. ಯಜ್ಞ, ಗಂಗಾದಿತೀರ್ಥ, ಬ್ರಾಹ್ಮಣಾದಿವರ್ಣ, ಬ್ರಹ್ಮಚರ್ಯಾದ್ಯಾಶ್ರಮ, ಪರಲೋಕ ಮುಂತಾದ ಯಾವತ್ತೂ ಜಗತ್ತು ಶಶವಿಷಾಣದಂತೆ ಸ್ವಪ್ನದಂತೆ, ಮರುಮರೀಚಿಕೆಯಂತೆ ಮಿಥ್ಯಾ ಅಸತ್ಯವಾದದ್ದು, ಶೂನ್ಯಒಂದೇ ಪಾರಮಾರ್ಥಿಕ ಸತ್ಯವಾದದ್ದು. |
| ೩. ಜೀವನು ಅಹಂಬ್ರಹ್ಮ ಅಹಂ ಬ್ರಹ್ಮ, ಎಂದು ಉಪಾಸನಾಮಾಡಿ ಬ್ರಹ್ಮಾತ್ಮೈಕ್ಯ ಸಾಕ್ಷಾತ್ಕಾರವನ್ನು ಹೊಂದಿ ಬ್ರಹ್ಮಭಾವವನ್ನು ಹೊಂದುವನು. | ೩. ಜೀವನು ಅಹಂಶೂನ್ಯಂ ಅಹಂಶೂನ್ಯಂ ಎಂದು ಉಪಾಸನಾಮಾಡಿ ಶೂನ್ಯೈಕ್ಯ ಸಾಕ್ಷಾತ್ಕಾರವನ್ನು ಹೊಂದಿ ಶೂನ್ಯಭಾವವನ್ನು ಹೊಂದುವನು. |

ಈಪ್ರಕಾರ ಎರಡೂ ಮತಗಳ ತತ್ವಗಳು ಒಂದೇ ಆದ್ದರಿಂದ ಅದ್ವೈತ ಮತವು ಶೂನ್ಯವಾದಿಗಳಾದ ಬೌದ್ಧರ ಮತವೇ.

ತಾಮಸ ಜನಗಳು ವೇದಗಳಲ್ಲಿ ಶ್ರದ್ಧಾಯುಕ್ತರಾಗಿ ವೇದೋಕ್ತ ಧರ್ಮಗಳನ್ನು ಮಾಡುತ್ತಾ ಆ ಧರ್ಮಬಲದಿಂದ ದೇವತೆಗಳಿಗೆ ಬಾಧಕಮಾಡುತ್ತಾ ಇರಲು ಆ ದೇವತಗಳಿಂದ ಪ್ರಾರ್ಥಿತನಾಗಿ ಪರಮಾತ್ಮನು ಆ ಅಸುರಜನಗಳನ್ನು ಧರ್ಮಮಾರ್ಗದಿಂದ ಭ್ರಷ್ಟರನ್ನಾಗಿಮಾಡಿ ಬಲಹೀನರನ್ನಾಗಿ ಮಾಡಬೇಕೆಂಬ ಉದ್ದೇಶದಿಂದ ಬುದ್ಧರೂಪವನ್ನು ಸ್ವೀಕರಿಸಿ ಮೋಹಕವಾದ ಬೌದ್ಧಶಾಸ್ತ್ರವನ್ನು ಮಾಡಿದನು, ಕಾಲಾಂತರದಲ್ಲಿ ಪುನಃ ಅಸುರಜನರು ವೇದದಲ್ಲಿ ಶ್ರದ್ಧಾಉಳ್ಳವರಾಗಿ ಧರ್ಮವನ್ನು ಅನುಷ್ಠಾನಮಾಡುವದಕ್ಕೆ ಪ್ರಾರಂಭ ಮಾಡಲು ಭಗವಂತನ ಆಜ್ಞಾನುಸಾರ ರುದ್ರದೇವರು ಬ್ರಾಹ್ಮಣ ಶರೀರವನ್ನು

ಹೊಂದಿ ಶ್ರುತಿವಾಕ್ಯಗಳಿಗೆ ಅಪಾರ್ಥಗಳನ್ನು ಕಲ್ಪನಾಮಾಡಿ ಬೌದ್ಧ ಮತಕ್ಕೆ ಮಾಯಾವಾದ ಶಾಸ್ತ್ರ (ಅದ್ವೈತಮತ) ವೆಂತ ಹೆಸರು ಇಟ್ಟು ಪ್ರಚಾರ ಮಾಡಿದ್ದಾರೆ. ಆ ಶಾಸ್ತ್ರದಲ್ಲಿ ಜೀವ ಪರಮಾತ್ಮರಗಳಿಗೆ ಐಕ್ಯವು, ಪರಮಾತ್ಮನಿಗೆ ನಿರ್ಗುಣತ್ವವು, ನಿರ್ವಿಶೇಷತ್ವ = ಸಕಲ ಧರ್ಮಾಭಾವವು ಹೇಳಲ್ಪಟ್ಟಿದೆ ಎಂದು ೧. ವಿಷ್ಣುಪುರಾಣ, ೨. ಪದ್ಮಪುರಾಣ,

---

೧. ಪ್ರಸೀದನಾಥದೈತ್ಯೇಭ್ಯಃ ತ್ರಾಹಿನಃ ಶರಣಾರ್ಥಿನಃ । ತ್ರೈಲೋಕ್ಯ ಯಜ್ಞಭಾಗಾಂಶ್ಚ ದೈತ್ಯೈರ್ಹ್ಲಾದ ಪುರೋಗಮೈಃ ॥ ಹೃತಾನೋ ಬ್ರಹ್ಮಣೋಽಪ್ಯಾಜ್ಞಾಮುಲ್ಲಂಘ್ಯಪರಮೇಶ್ವರ । ಸ್ವವರ್ಣಧರ್ಮಾಭಿರತಾ ವೇದಮಾರ್ಗಾನುಸಾರಿಣಃ ॥ ನಶಕ್ಯಾಸ್ತೇರಯೋಽಹಂತು ಮಸ್ಮಾಭಿಸ್ತಪಸಾವೃತಾಃ । ತಮುಪಾಯಮಶೇಷಾತ್ಮ ಅಸ್ಮಾಕಂ ದಾತುಮರ್ಹಸಿ ॥ ಯೇನತಾನಸುರಾನ್ಹಂತುಂ ಭವೇಮ ಭಗವನ್ ಕ್ಷಮಾಃ | ಇತ್ಯುಕ್ತೋ ಭಗವಾಂಸ್ತೇಭ್ಯೋ ಮಾಯಾಮೋಹಂ ಶರೀರತಃ । ಸಮುತ್ಪಾದ್ಯ ದದೌವಿಷ್ಣುಃ ಪ್ರಾಹಚೇದಂ ಸುರೋತ್ತಮಾನ್ ॥ ಮಾಯಾಮೋಹೋಽಯಮಖಿಲಾನ್ ದೈತ್ಯಾಂಸ್ತಾನ್ ಮೋಹಯಿಷ್ಯತಿ | ತತೋವಧ್ಯಾಭವಿಷ್ಯಂತಿ ವೇದಮಾರ್ಗ ಬಹಿಷ್ಕೃತಾಃ | ಇತ್ಯುಕ್ತಾ ಪ್ರಣಿಪತ್ಯೈನಂ ಯಯುರ್ದೇವಾಯಥಾಗತಂ॥

೨. ಪಾರ್ವತ್ಯುವಾಚ - ತಾಮಸಾನಿಚಶಾಸ್ತ್ರಾಣಿ ಸಮಾಚಕ್ಷ್ವ ಮಮಾನಘ | ಸಂಪ್ರೋಕ್ತಾನಿಚಯೈರ್ವಿಪ್ರೈ ರ್ಭಗವದ್ಭಕ್ತಿವರ್ಜಿತೈಃ | ತೇಷಾಂ ನಾಮಾನಿ ಕ್ರಮಶಃ ಸಮಾಚಕ್ಷ್ವ ಸುರೇಶ್ವರ।

ರುದ್ರವುವಾಚ - ಶೃಣುದೇವಿ ಪ್ರವಕ್ಷ್ಯಾಮಿ ತಾಮಸಾನಿಯಥಾಕ್ರಮಂ । ಯೇಷಾಂಸ್ಮರಣಮಾತ್ರೇಣ ಪಾತಿತ್ಯಂ ಜ್ಞಾನಿನಾಮಪಿ | ಪ್ರಥಮಂ ಹಿಮಯಾಪ್ರೋಕ್ತಂ ಶೈವಂ ಪಾಶುಪತಾದಿಕಂ । ಮಚ್ಛಕ್ತ್ಯಾವೇಶಿತೈರ್ವಿಪ್ರೈಃ ಪ್ರೋಕ್ತಾನಿಚ ತತಃಶೃಣುಃ । ಕಣಾದೇನತು ಸಂಪ್ರೋಕ್ತಂ ಶಾಸ್ತ್ರಂವೈಶೇಷಿಕಂ ಮಹತ್ । ಗೌತಮೇನ ತಥಾನ್ಯಾಯಂ ಸಾಂಖ್ಯಂತು ಕಪಿಲೇನವೈ । ಧಿಷಣೇನ ತಥಾಪ್ರೋಕ್ತಂ ಚಾರ್ವಾಕಮತಿ ಗರ್ಹಿತಂ । ದೈತ್ಯಾನಾಂ ನಾಶನಾರ್ಥಾಯ ವಿಷ್ಣುನಾ ಬುದ್ಧರೂಪಿಣಾ ॥ ಬೌದ್ಧಶಾಸ್ತ್ರಮಸತ್ಪ್ರೋಕ್ತಂ ನಗ್ನನೀಲ ಪಟಾದಿಕಂ । ಮಾಯಾವಾದ ಮಸಚ್ಛಾಸ್ತ್ರಂ ಪ್ರಚ್ಛನ್ನಂ ಬೌದ್ಧಮುಚ್ಯತೇ । ಮಯೈವಕಥಿತಂ ದೇವಿ ಕಲೌಬ್ರಾಹ್ಮಣರೂಪಿಣಾ । ಅಪಾರ್ಥಂ ಶ್ರುತಿವಾಕ್ಯಾನಾಂ ದರ್ಶಯನ್ ಲೋಕಗರ್ಹಿತಂ। ......... ಪರೇಶಜೀವಯೋರೈಕ್ಯಂ ಮಯಾತು ಪ್ರತಿಪಾದ್ಯತೇ।ಬ್ರಹ್ಮಣೋಽಸ್ಯ ಸ್ವಯಂರೂಪಂ ನಿರ್ಗುಣಂ ವಕ್ಷ್ಯತೇ ಮಯಾ। ಸರ್ವಸ್ಯಜಗತೋಽಪ್ಯತ್ರ ಮೋಹನಾರ್ಥಂ ಕಲೌಯುಗೇ। ವೇದಾರ್ಥವನ್ಮಹಾಶಾಸ್ತ್ರಂ ಮಾಯಾವಾದ ಮವೈದಿಕಂ ॥ (ಪದ್ಮಪುರಾಣ)

೩. ಬ್ರಹದ್ ಬ್ರಹ್ಮ ಸಂಹಿತಾ ಮೊದಲಾದ ಪುರಾಣಗಳಲ್ಲಿ ವೇದವ್ಯಾಸದೇವರು ಪರಾಶರ ಋಷಿಗಳು ಮುಂತಾದವರು ಹೇಳಿರೋಣದರಿಂದ ಅದ್ವೈತಮತವು ಬೌದ್ಧಮತವೇ ಎಂದು ಸಿದ್ಧಿಸುತ್ತದೆ.

೪. ಮತ್ತು ಶಂಕರಾಚಾರ್ಯರಗಿಂತಲೂ ಪ್ರಾಚೀನರಾದ ಅವರ ಪರಮ ಗುರುಗಳಾದ ಗೌಡಪಾದಾಚಾರ್ಯರ ಸಮಕಾಲದವರಾದ ಪಂಡಿತರುಕೂಡಾ ಅದ್ವೈತಮತವು ಬೌದ್ಧಮತವೇ ಎಂದು ಹೇಳಿದ್ದಾರೆ ಎಂದು ಗೌಡಪಾದಾಚಾರ್ಯರ ಗ್ರಂಥದಿಂದ (೫) ಅದಕ್ಕೆ ವ್ಯಾಖ್ಯಾನರೂಪವಾದ ಶಂಕರಾಚಾರ್ಯರ ಭಾಷ್ಯದಿಂದ ೬. ಅದಕ್ಕೆ ವ್ಯಾಖ್ಯಾನರೂಪವಾದ ಆನಂದಗಿರಿಯ ಗ್ರಂಥದಿಂದ ೭. ಮತ್ತು ಗೌಡಪಾದಕಾರಿಕೆಗೆ ವ್ಯಾಖ್ಯಾನರೂಪ ಮಿತಾಕ್ಷರಾ ೮. ಗೌಡಪಾದೀಯ ವಿವೇಕ ಇತ್ಯಾದಿಗ್ರಂಥಗಳಿಂದ ತಿಳಿದು ಬರುವದರಿಂದ,

---

೩. ರಾಜನ್‌ಕಾರ್ಯಸ್ಯ ಮಿಥ್ಯಾತ್ವಂ ನೈರ್ಗುಣ್ಯಂ ಪರಮಾತ್ಮನಃ। ಆಭಾಸವಾದೋ ಜೀವಸ್ಯ ಪಾಷಂಡೈರುಪಕಲ್ಪಿತಃ। ನೈತದ್ವಿಶ್ವಸನೀಯಂ ತೇ ಮಯೋಕ್ತಮಪಿ ಮಾಯಯಾ। ಆಜ್ಞಯಾ ವಾಸುದೇವಸ್ಯ ಮೋಹನಾಯ ಸುರದ್ವಿಷಾಂ। ಪ್ರವರ್ತಿತ ಮಸಚ್ಛಾಸ್ತ್ರ ಮಯಥಾರ್ಥಸ್ಯ ಶಾಸನಾತ್ ...... ಮಾಯಾವಾದಮಿದಂ ಶಾಸ್ತ್ರಂ ಮಾಯಾಮೋಹ ಪ್ರವರ್ತಿತಂ।

೪. ಜ್ಞಾನಮಾತ್ರಂ ಪಾರಮಾರ್ಥಿಕಂ। ತತ್ರೈವ ಜ್ಞಾತೃಜ್ಞೇಯಾದಿ ಕಲ್ಪಿತಮಿತಿ ಸೌಗತಮತಮೇವ ಭವತಾಪಿ ಸಂಗೃಹೀತ ಮಿತ್ಯಾಶಂಕ್ಯಾಹ ಜ್ಞಾನಮಿತಿ (ಆನಂದ.)

೫. ಜ್ಞಾನಂ ನೈತದ್ಬುದ್ಧೇನಭಾಷಿತಂ (ಗೌಡಪಾದೀಯ.)

೬. ಜ್ಞಾನಜ್ಞೇಯಜ್ಞಾತೃಭೇದರಹಿತಂ ಪರಮಾರ್ಥತತ್ವಮದ್ವಯಮೇತನ್ನ ಬುದ್ಧೇನ ಭಾಷಿತಂ.

೭. ಮೇಲೆ ಹೇಳಿದ ಮೂರುಪ್ಯಾರಾಗಳ ವಾಕ್ಯಗಳೇ.
ಯದ್ಯಪಿ ಬಾಹ್ಯಾರ್ಥನಿರಾಕರಣಂ ಜ್ಞಾನಮಾತ್ರಕಲ್ಪನಾಚಾದ್ವಯ ವಸ್ತು ಸಾಮೀಪ್ಯಮುಕ್ತಂ ಇದಂತು ಪರಮಾರ್ಥತತ್ವಮದ್ವೈತಂ ವೇದಾಂತೇಷ್ವೇವ ವಿಜ್ಞೇಯ ಮಿತ್ಯರ್ಥಃ॥ (ಶಾಂ. ಭಾ)

೮. ನನು ಜ್ಞಾನಮಾತ್ರಮೇವ ತತ್ತ್ವಂ ಜ್ಞಾತೃಜ್ಞೇಯಾದಿ ಸರ್ವಂ ತತ್ರ ಕಲ್ಪಿತಂ ...... ಬೌದ್ಧಮತಾಚಾರಃ ಸ್ಯಾತ್ ಇತ್ಯತಆಹ—ನೈತದಿತಿ। ಯದ್ಯಪಿ ಬಾಹ್ಯಾರ್ಥ ನಿರಾಕರಣಂ ಜ್ಞಾನಮಾತ್ರಸ್ಯಾಸ್ತಿತ್ವಂ ಚಸ್ವೀಕೃತಂ ತಥಾಪಿ ನೈತದದ್ವೈತ ದರ್ಶನಂ ಬುದ್ಧೇನ ಸುಗತೇನಭಾಷಿತಂ ಭೇದಾಂಗೀಕಾರಾದಿತ್ಯರ್ಥಃ। ಪರಮಾರ್ಥಾದ್ವೈತದರ್ಶನಂ ವೇದಾಂತೈಕಗಮ್ಯಮಿತಿ ನಾನ್ಯಸಾಧಾರಣ ಮಿತ್ಯರ್ಥಃ.

ಮತ್ತು ಶಂಕರಾಚಾರ್ಯರ ಸಮಕಾಲೀನರಾದ ೯. ಭಾಸ್ಕರಾಚಾರ್ಯರು ತಥಾ ೧೦. ವಿಜ್ಞಾನಭಿಕ್ಷುಗಳು ೧೧. ಪಾರ್ಥಸಾರಥಿಮಿಶ್ರರು ಮುಂತಾದ ಅನೇಕ ಪಂಡಿತರು ಅದ್ವೈತಮತವು ಬೌದ್ಧಮತವೆಂದು ಹೇಳಿರೋಣದರಿಂದಲೂ ಪೂರ್ವದಲ್ಲಿ ಹೇಳಿದಪ್ರಕಾರ ತತ್ವಗಳ ತುಲನಾಮಾಡಿ ನೋಡೋಣದರಿಂದಲೂ ಅದ್ವೈತಮತವು ಬೌದ್ಧಮತವೇ ಎಂದು ಕೋರ್ಟಿನವರಿಂದ ನಿರ್ಣಯಮಾಡಲ್ಪಡುತ್ತದೆ (ತೀರ್ಮಾನ ಕೊಡಲ್ಪಡುತ್ತದೆ.)

"ಪ್ರತಿವಾದಿಗಳು ದ್ವೇಷಮೂಲಕವಾಗಿ ಹೇಳಿದ್ದು ನಿಜವೆಂದು ಒಪ್ಪುವದಾದರೆ ಎಲ್ಲಾಮತಗಳಿಗೂ ಪ್ರತಿವಾದಿಗಳು ಇದ್ದೇ ಇರುತ್ತಾರೆ ಅವರು ಇನ್ನೊಂದು ಮತವನ್ನು ದೂಷಿಸುತ್ತಾರೆ, ಆ ದೂಷಣೆಗಳನ್ನು ಒಪ್ಪಬೇಕಾಗುವದು, ಹಾಗೆ ಒಪ್ಪುವದು ಯುಕ್ತವಲ್ಲವಾದಕಾರಣ ಈ ಅದ್ವೈತಮತದ ಪ್ರತಿವಾದಿಗಳಾದ ಭಾಸ್ಕರಾಚಾರ್ಯ ಮುಂತಾದವರು ದ್ವೇಷಮೂಲಕವಾಗಿ ಅದ್ವೈತಮತವು ಬೌದ್ಧಮತವೆಂದು ಹೇಳಿದ್ದನ್ನು ಒಪ್ಪತಕ್ಕದ್ದು ಯುಕ್ತವಲ್ಲ" ಎಂದು ಪ್ರತಿವಾದಿ ಹೇಳುವದನ್ನು ಕೋರ್ಟಿನವರು ನಿರಾಕರಿಸುತ್ತಾರೆ.

ಯಾಕೆಂದರೆ ೧೨. ಸಾಕ್ಷಾತ್ ನಾರಾಯಣನ ಅವತಾರವೆಂದು ಅದ್ವೈತಿಗಳಿಂದಲೂ ಅಂಗೀಕರಿಸಲ್ಪಟ್ಟ ಬಾದರಾಯಣ (ವೇದವ್ಯಾಸ) ದೇವರು ಮಹಾತ್ಮರುಗಳಾದ ಪರಾಶರ ಮುಂತಾದವರು ದ್ವೇಷಮೂಲಕವಾಗಿ ಸುಳ್ಳು ಹೇಳುತ್ತಾರೆ ಎಂಬುವದುಕೂಡುವದಿಲ್ಲ. ಸಾಕ್ಷಿದಾರನು ದೊಡ್ಡ ಮನುಷ್ಯನೇ

---

೯. ಯೆತುಬೌದ್ಧಮತಾವಲಂಬಿನೋ ಮಾಯಾವಾದಿನಸ್ತೇಪ್ಯನೇನ ನ್ಯಾಯೇನ ಸೂತ್ರಕಾರೇಣೈವ ನಿರಸ್ತಾ ವೇದಿತವ್ಯಾಃ'। 'ಮಹಾಯಾನಿಕ ಬೌದ್ಧಗಾಥಿತಂ ಮಾಯಾವಾದಂ ವ್ಯಾವರ್ಣಯಂತೋ ಲೋಕಾನ್ ವ್ಯಾಮೋಹಯಂತಿ'।

೧೦. ಯೆತುರಜ್ಜು ಸರ್ಪಾದಿವತ್ ಪ್ರಪಂಚಸ್ಯಾತ್ಯಂತತುಚ್ಛತ್ವಮಿಚ್ಛಂತಿ ತೇತು ಬೌದ್ಧಪ್ರಭೇದಾಏವ। ಮಾಯಾವಾದಮಸಚ್ಛಾಸ್ತ್ರಂ ಪ್ರಚ್ಛನಂ ಬೌದ್ಧಮೇವಚ ಇತ್ಯಾದಿ ಪದ್ಮಪುರಾಣವಾಕ್ಯಾತ್ । ಅಸತ್ಯಮ ಪ್ರತಿಷ್ಠಂತೆ ಜಗದಾಹುರನೀಶ್ವರಂ ಇತ್ಯಾದಿ ಗೀತಾವಾಕ್ಯಾಚ್ಚ ।

೧೧. 'ತತ್ಪರಂ ಅಸ್ಮಾನ್ಮಾಯಾವಾದಾತ್ ಮಹಾಯಾನಿಕವಾದಃ'

೧೨. ದ್ವಾಪರೇ ದ್ವಾಪರೇವಿಷ್ಣುಃ ವ್ಯಾಸರೂಪೀ ಮಹಾಮುನೇ। ವೇದಮೇಕಂ ಸುಬಹುಧಾ ಕುರುತೇ ಜಗತೋಹಿತಂ। (ಪರಾಶರಃ).

ಆಗಲಿ ಅಥವಾ ಸಣ್ಣಮನುಷ್ಯನೇ ಆಗಲಿ ಅವನುಹೇಳಿದಕ್ಕೆ ಎದುವರಿಗೆ ಬಾಧಕ ಬರುವದಿಲ್ಲವೋ ಅಲ್ಲಿಯವರೇಗೂ ಅವನು ಹೇಳಿದ್ದು ಸತ್ಯವೆಂದೇ ಗ್ರಹಿಸ ತಕ್ಕದ್ದು, ಈ ಪ್ರಕಾರ ನಿಯಮ (Rule) ಉಂಟು. ಸ್ವತಃ ಪ್ರಾಮಾಣ್ಯವು ಪರತಃ ಅಪ್ರಾಮಾಣ್ಯವು ಎಂದು ಹೇಳುವ ಶಾಸ್ತ್ರಕಾರರಾದರೂ ಯಾವವಾಕ್ಯ ದಿಂದ ಯಾವ ಅರ್ಥವು ಹೇಗೆ ಹೇಳಲ್ಪಡುತ್ತದೆಯೋ, ಬಾಧಕ ಬಾರದೆ ಹೋದರೆ ಆ ಅರ್ಥವನ್ನು ಹಾಗೆಯೇ ಒಪ್ಪತಕ್ಕದ್ದು. ("ಸ್ವತಃ ಪ್ರಾಮಾಣ್ಯವು", ಬಾಧಕ ಬಂದರೇನೆ ಆ ವಾಕ್ಯದಿಂದ ಹೇಳಿದ ಅರ್ಥವನ್ನು ಒಪ್ಪಕೂಡದು (ಪರತಃ ಅಪ್ರಾಮಾಣ್ಯವು) ಎಂದು ಒಪ್ಪಿದ್ದಾರೆ. ಪ್ರಕೃತಕ್ಕೆ ಭಾಸ್ಕರಾಚಾ ರ್ಯರೇ ಮೊದಲಾದ ಪಂಡಿತರು ಅದ್ವೈತಮತವು ಬೌದ್ಧಮತವೇ ಎಂದು ಹೇಳಿದ್ದಾರೆ, ಅದಕ್ಕೆ ಯಾವ ಬಾಧಕವೂ ಬಂದಿಲ್ಲ. ಇಷ್ಟೇ ಅಲ್ಲದೆ, ಉಭಯ ಮತಗಳ ತತ್ವಗಳನ್ನು ಹೋಲಿಸಿ ನೋಡಿದರೆ ಅವೆರಡೂ ಒಂದೇ ಎಂದು ಸಿದ್ಧಿಸುತ್ತವೆ. ಆದ್ದರಿಂದ "ಭಾಸ್ಕರಾಚಾರ್ಯ ಮುಂತಾದವರು ಹೇಳಿದ್ದು ದ್ವೇಷ ಮೂಲಕವಾದ್ದರಿಂದ ಒಪ್ಪಬಾರದೆಂದು" ಪ್ರತಿವಾದಿಗಳು ಹೇಳಿದ್ದನ್ನು ಕೋರ್ಟಿ ನವರು ನಿರಾಕರಿಸುತ್ತಾರೆ.

ಅದ್ವೈತಿಗಳಾದ ಬ್ರಹ್ಮವಿದ್ಯಾಭರಣಕಾರರು "ಶೂನ್ಯವಾದಿ ಪಕ್ಷಸ್ತು" ಎಂಬ ಭಾಷ್ಯಕ್ಕೆ ವ್ಯಾಖ್ಯಾನಮಾಡುವಕಾಲದಲ್ಲಿ ಬೌದ್ಧರು. ಶೂನ್ಯವು ಭಾವ ರೂಪವೆಂದು ಒಪ್ಪಿದರೆ ಆಶೂನ್ಯವು ನಮ್ಮ (ಅದ್ವೈತಿಗಳ) ಬ್ರಹ್ಮರೂಪವೇ ಆಗಿ ನಮ್ಮ ಬ್ರಹ್ಮವಾದವು ಶೂನ್ಯವಾದವು ಒಂದೇ ಆಗುತ್ತದೆ ಎಂದು ಕಂಠತಃ ಎರಡೂ ಮತಗಳು ವಂದೇ ಎಂದು ಒಪ್ಪಿದ್ದಾರೆ. ಮತ್ತು ಅದೇ ಬ್ರಹ್ಮವಿದ್ಯಾ ಭರಣಕಾರರು ಶೂನ್ಯವು ಪ್ರಪಂಚಾಭಾವರೂಪವಾದರೆ ಪ್ರಪಂಚವು ಪ್ರಮಾಣ ದಿಂದ ಉಪಲಬ್ಧವಾಗುತ್ತಿರುವಲ್ಲಿ ಪ್ರಪಂಚವೇ ಇಲ್ಲ ಪ್ರಪಂಚಾಭಾವವೇ (ಶೂನ್ಯವೇ) ತತ್ವವೆಂದು ಸಮರ್ಥನೆ ಮಾಡಲು ಅಶಕ್ಯವೆಂದು ದೂಷಣೆ ಯನ್ನೂ ಮಾಡಿದ್ದಾರೆ.

ಅದ್ವೈತಿಗಳು ಬ್ರಹ್ಮನು ಪ್ರಪಂಚಾಭಾವರೂಪನೆಂದು ಅದ್ವೈತಸಿದ್ಧಿ ಖಂಡನಖಂಡಖಾದ್ಯ ಮೊದಲಾದ ಅನೇಕ ಗ್ರಂಥಗಳಲ್ಲಿ ಒಪ್ಪಿದ್ದಾರಾದ ಪ್ರಯುಕ್ತ ಶೂನ್ಯವು ಪ್ರಪಂಚಾಭಾವರೂಪವು ಎಂಬ ಪಕ್ಷದಲ್ಲಿ ಕೂಡ ಪ್ರಪಂಚಾಭಾವರೂಪನಾದ ಬ್ರಹ್ಮನು ಪ್ರಪಂಚಾಭಾವರೂಪವಾದ ಶೂನ್ಯವು ಒಂದೇ ಆಗಿ ಆ ಎರಡೂ ಮತಗಳು ಒಂದೇ ಆಗುತ್ತವೆ. ಆದಕಾರಣ ಅದ್ವೈತಮತವೂ ಶೂನ್ಯವಾದಿಗಳಾದ ಬೌದ್ಧರಮತವೂ ಒಂದೇ ಎಂದು ಕೋರ್ಟಿನವರು ನಿರ್ಣಯಮಾಡುತ್ತಾರೆ.

"ಯಾವ ಶಂಕರಾಚಾರ್ಯರು ಬೌದ್ಧಮತವನ್ನು ಖಂಡನ ಮಾಡಿ
ದ್ದಾರೋ ಅಂಥಾ ಶಂಕರಾಚಾರ್ಯರ ಅದ್ವೈತಮತವು ಬೌದ್ಧಮತವೆಂಬುವದು
ಅಯುಕ್ತವಾದದ್ದು" ಎಂದು ಅದ್ವೈತಿಗಳು ಹೇಳುವದು ಸರಿಯಲ್ಲ. ಕಾರಣ
"ಬೌದ್ಧಾದಿ ನಾಸ್ತಿಕಧ್ವಸ್ತ ವೇದಮಾರ್ಗಂ ಪುರಾಕಿಲ। ಭಟ್ಟಾಚಾರ್ಯಃ ಕುಮಾ
ರಾಂಶಃ ಸ್ಥಾಪಯಾಮಾಸಭೂತಲೇ। ವೇದಬಾಹ್ಯಾನ್ನಿರಾಕೃತ್ಯ ಭಟ್ಟಾಚಾರ್ಯೈರ್ಮಾ
ರ್ಗತೇಪಥಿ"(ಶಂಕರಾಚಾರ್ಯಕೃತ ಸರ್ವಸಿದ್ಧಾಂತಸಾರಸಂಗ್ರಹ) ಇವೇಮೊದ
ಲಾದ ಶ್ಲೋಕಗಳಿಂದ ಬೌದ್ಧರೇ ಮೊದಲಾದ ನಾಸ್ತಿಕರಿಂದ ನಾಶಮಾಡಲ್ಪಟ್ಟ
ವೇದಮಾರ್ಗವನ್ನು ಕುಮಾರಿಲಭಟ್ಟರು ಭೂಮಂಡಲದಲ್ಲಿ ಸ್ಥಾಪನಮಾಡಿದರು.
ವೇದಬಾಹ್ಯರನ್ನು (ಬೌದ್ಧರನ್ನು) ನಿರಾಕರಣಮಾಡಿ ಕುಮಾರಿಲ ಭಟ್ಟರಿಂದ
ಸ್ಥಾಪಿಸಲ್ಪಟ್ಟ ವೇದಮಾರ್ಗದಲ್ಲಿ ಜನರು ಪ್ರವೃತ್ತರಾದರು ಎಂದು, ಶಂಕರಾ
ಚಾರ್ಯರೇ ಸ್ಪಷ್ಟವಾಗಿ ಹೇಳಿದ್ದಾರೆ. ಮತ್ತು ಆನಂದಗಿರಿ ಎಂಬವರಿಂದ ಮಾಡ
ಲ್ಪಟ್ಟ ೧೩. ಶಂಕರವಿಜಯ ಗ್ರಂಥದಿಂದ ಭಟ್ಟಾಚಾರ್ಯ (ಕುಮಾರಿಲ) ನೆಂಬ
ಒಬ್ಬ ಬ್ರಾಹ್ಮಣಶ್ರೇಷ್ಠನು ಉತ್ತರದೇಶದಿಂದ ಬಂದು ದುಷ್ಟಮತವನ್ನು ಆಶ್ರ
ಯಿಸಿದ್ದಂಥ ಅಸಂಖ್ಯಾಕರಾದ ಬೌದ್ಧರನ್ನೂ ಜೈನರನ್ನೂ ಶಾಸ್ತ್ರಾರ್ಥ ವಿಚಾರ
ಮಾಡಿ ಗೆದ್ದು ರಾಜದ್ವಾರಾ ಆ ಬೌದ್ಧರ ಶಿರಸ್ಸುಗಳನ್ನು ಕೊಡಲಿಗಳಿಂದ ಕಡಿಸಿ
ಒರಲುಗಳಲ್ಲಿ ಹಾಕಿಸಿ ಚೂರ್ಣಮಾಡಿ ನಿರ್ಭಯನಾಗಿ ಇದ್ದಾನೆಂಬ ಅದ್ಭುತ
ವಾದ ಕರ್ಮವನ್ನು ಶಂಕರಾಚಾರ್ಯರು ಕೇಳಿ ಆ ಕುಮಾರಿಲಭಟ್ಟನು ಇರತಕ್ಕ
ಜಯಘೋಷದಿಂದ ಪೂರ್ಣವಾದ ರುದ್ಧ ಎಂಬ ಪಟ್ಟಣಕ್ಕೆ ಶಿಷ್ಯಸಮೇತರಾಗಿ
ಹೋಗಲಾಗಿ, ತನ್ನಲ್ಲಿಗೆ ಬಂದಂಥಾ ಶಂಕರಾಚಾರ್ಯರನ್ನು ಕುರಿತು, ಎಲೈ!
ನೂತನನಾದ ಬೌದ್ಧಶ್ರೇಷ್ಠನೇ, ನಾನು ಜಾಗ್ರತನಾಗಿ ಇರುವಕಾಲಕ್ಕೆ ಬರಲಿಲ್ಲ
ಈಗ್ಗೆ ಮೊಳಕಾಲಪರ್ಯಂತ ಸುಟ್ಟು ಹೋಗಿದ್ದೇನೆ" ಎಂದು ಹೇಳಿದನು ಎಂದು

---

ಭಟ್ಟಾಚಾರ್ಯಾಖ್ಯೋ ದ್ವಿಜವರಃ ಕಶ್ಚಿದುದಗ್ದೇಶಾದಾಗತ್ಯ ದುಷ್ಟಮತಾ
ವಲಂಬಿನೋ ಬೌದ್ಧಾನ್ ಜೈನಾನಸಂಖ್ಯಾಕಾನ್ ರಾಜಮುಖಾದನೇಕ ವಿದ್ಯಾಪ್ರ
ಸಂಗ ಭೇದೈರ್ನಿರ್ಜಿತ್ಯ ತೇಷಾಂ ಶೀರ್ಷಾಣಿ ಪರಶುಭಿಶ್ಛಿತ್ವಾ ಬಹುಷು ಉಲೂ
ಖಲೇಷು ನಿಕ್ಷಿಪ್ಯ ಕಟಭ್ರಮಣೈಶ್ಚೂರ್ಣೀಕೃತ್ಯ ಚೈವಂದುಷ್ಟಮತ ಧ್ವಂಸ
ನಾಚರನ್ ನಿರ್ಭಯೋವರ್ತತೇ. "ಶ್ರುತ್ವೈತದದ್ಭುತಂ ಕರ್ಮಗುರುಃ (ಶಂಕರಃ
ಶಿಷ್ಯಸಮನ್ವಿತಃ। ಪ್ರಾಪ್ತೋ ರುದ್ರಾಖ್ಯನಗರಂ ಜಯಶಬ್ದ ವಿಜೃಂಭಿತಂ(ತದನು)
ಜಾನುಮಾತ್ರದಗ್ಧೋಪಿ ಭಟ್ಟಾಚಾರ್ಯಃ ತಂ (ಶಂಕರಾಚಾರ್ಯಂ ಪ್ರತಿ
ಜಾಗ್ರತ್ಕಾಲಾನಾಗತೋ ನೂತನೋ ಬೌದ್ಧತರಃ ಇತಿಪ್ರಾಹೇತ್ಯಾದಿ (ಆನಂದ
ಗಿರಿ ಶಂಕರವಿಜಯ).

ತಿಳಿದು ಬರುತ್ತದೆ. ಮತ್ತು ಇದೇಪ್ರಕಾರ ೧೪. ವಿದ್ಯಾರಣ್ಯ ಶಂಕರ ವಿಜಯ ದಿಂದಲೂ ತಿಳಿದು ಬರುತ್ತದೆ. ಆದುದರಿಂದ ಶಂಕರಾಚಾರ್ಯರು ಬೌದ್ಧಮತ ವನ್ನು ಖಂಡನಮಾಡಿದರು ಎಂಬುವದು ಅತ್ಯಂತ ಸುಳ್ಳು ಆವದ್ದು ಎಂದು ಕೋರ್ಟಿನಿಂದ ನಿರ್ಣಯಮಾಡಲ್ಪಡುತ್ತದೆ.

ಬೌದ್ಧರು ಹೇಳುವ ಶೂನ್ಯವು ನಿರ್ವಿಶೇಷವಲ್ಲ, ಸತ್ಯವಲ್ಲ, ಜ್ಞಾನರೂಪ ವಲ್ಲ, ಆನಂದರೂಪವಲ್ಲ, ಅಜ್ಞೇಯವಲ್ಲ, ಅವಾಚ್ಯವಲ್ಲ. ಆದಕಾರಣ ನಿರ್ವಿ ಶೇಷ ಸತ್ಯಜ್ಞಾನಾನಂದಾದಿರೂಪನಾದ ಬ್ರಹ್ಮನು ಶೂನ್ಯದ ದಸೆಯಿಂದ ಭಿನ್ನನು ಎಂದು ಮೊದಲನೇ ತತ್ವವಿಷಯದಲ್ಲಿ ಪ್ರತಿವಾದಿಗಳು ಹೇಳುವದನ್ನು ವಿಚಾರಮಾಡಲಾಗಿ "ನಿರ್ವಿಶೇಷತತ್ವಾ ಚಾಖ್ಯಾನ್ಯವಚಾಖ್ಯಾನ್ಯಃ" ಈ ಸಹಸ್ರನಾಮದ ಶಂಕರಾಚಾರ್ಯರ ಭಾಷ್ಯದಿಂದಲೂ "ನಿರ್ವಿಶೇಷಂ ಸ್ವಯಂಭಾತಂ" ಎಂಬ ಬೌದ್ಧರ ವಾಕ್ಯದಿಂದಲೂ ಅದ್ವೈತಿಗಳ ಬ್ರಹ್ಮನಂತೇ ಶೂನ್ಯವೂ ನಿರ್ವಿಶೇಷ ಎಂದು ಸಿದ್ಧಿಸುತ್ತದೆ.

"ದ್ವೇಸತ್ಯೇ ಸಮುಪಾಶ್ರಿತ್ಯ ಬುದ್ಧಾನಾಂ ಧರ್ಮದೇಶನಾ | ಲೋಕೇ ಸಾಂವೃತ ಸತ್ಯಂಚ ಸತ್ಯಂಚ ಪರಮಾರ್ಥತಃ" || ಇವೇ ಮೊದಲಾದ ಬೌದ್ಧರ ವಾಕ್ಯಗಳಿಂದ "ಶೂನ್ಯವಾದಿನಾಂ ಶೂನ್ಯತಾಯಾ ಅಪಿ ಸತ್ಯತ್ವಾತ್" ಎಂಬ ಭಾಮತಿ ಮೊದಲಾದ ಅದ್ವೈತಿಗಳ ವಾಕ್ಯದಿಂದ ಶೂನ್ಯವು ಬ್ರಹ್ಮನಂತೆ ಸತ್ಯ ವೆಂದು ಸಿದ್ಧಿಸುತ್ತದೆ.

"ಶೂನ್ಯವಾದಿಭಿರಪಿ ಸತ್ವರಹಿತ ಜ್ಞಾನಾನಂದಾತ್ಮಕತ್ವಸ್ಯ ಬ್ರಹ್ಮ ಣೋನ್ಯತ್ರಾಂಗೀಕಾರಾತ್" ಎಂಬ ಅದ್ವೈತಸಿದ್ಧಿವಾಕ್ಯದಿಂದ "ಶೂನ್ಯವಾದಸ್ಯ ವಿಜ್ಞಾನವಾದ ವಿಶೇಷರೂಪತ್ವಾತ್ ತಥಾಚಾನಂದೋಽಪಿ ಜ್ಞಾನಾಕಾರತ್ವಾತ್ ಜ್ಞಾನಾಭಿನ್ನ ಇತಿ ಜ್ಞಾನಾತ್ಮಕಾನಂದತ್ವಂ ತನ್ಮತೆ (ಶೂನ್ಯವಾದಿಮತೆ) ಬ್ರಹ್ಮ

---

೧೪. ಉಪನ್ಯಸತ್ಸು ಸಾಕ್ಷೇಪಂ ಖಂಡಯತ್ಸು ಪರಸ್ಪರಂ । ತೇಷಾದಕಿಂಚಿ ನ್ನಿರ್ಘೋಷೋಭಿಂದನ್ನಿರಸಾತಲಂ || ಅಧಃ ಪೇತುರ್ಬುಧೇಂದ್ರೇಣ ಕ್ಷತಾಃ ಪಕ್ಷೇಷು ತತ್ ಕ್ಷಣಂ। ವ್ಯಾಡಕರ್ಕಶತರ್ಕೇಣ ತಥಾಗತಧರಾಧರಾಃ। ನಿರಸ್ತಾಖಿಲ ಸಂದೇಹೋ ವಿಸ್ಮಸ್ಮಿತರದರ್ಶನಾತ್ । ವ್ಯಥಾದಾಜ್ಞಾಂತತೋರಾಜಾ ವಧಾಯ ಶ್ರುತಿವಿದ್ವಿಷಾಂ । ಆಸೇತೋರಾತುಷಾರಾದ್ರೇ ರ್ಬೌದ್ಧಾನಾವೃದ್ಧಬಾಲಕಂ | ನಹಂತಿ ಯಸ್ಸಹಂತವ್ಯೋ ಭೃತ್ಯಾನಿತ್ಯನ್ವಶಾನ್ನೃಪಃ । ಕುಮಾರಿಲ ಮೃಗೇಂ ದ್ರೇಣ ಹತೇಷು ಜಿನಹಸ್ತಿಷು । ನಿಷ್ಪ್ರತ್ಯೂಹಮವರ್ಧಂತ ಶ್ರುತಿಶಾಖಾಸ್ಸ ಮಂತತಃ (ವಿದ್ಯಾ. ಶಂ. ವಿಜಯ).

ಭಿನ್ನೋಽಪೀತಿ ಎಂಬ ಗೌಡಬ್ರಹ್ಮಾನಂದೀಯ ವಾಕ್ಯದಿಂದಲೂ "ಕೇವಲಾಂ ಸಂವಿದಂ ಸ್ವಸ್ಥಾಂ ಮನ್ಯಂತೇ ಮಧ್ಯಮಾಪ್ರಸಃ" "ಅದ್ವಯಜ್ಞಾನೈಕರೂಪಾಂ ಶೂನ್ಯತಾಂ ವಿಭಾವ್ಯ ಓಂ ಶೂನ್ಯ ಜ್ಞಾನವಜ್ರ ಸ್ವಭಾವಾತ್ಮಕೋಽಹಂ" "ಕೇವಲಾಂ ಅದ್ವಯ ವಿಜ್ಞಪ್ತಿಲಕ್ಷಣಾಂ" ಇವೇ ಮೊದಲಾದ ಬೌದ್ಧರವಾಕ್ಯಗಳಿಂದಲೂ, ಬೌದ್ಧರಶೂನ್ಯವು ಅದ್ವೈತಿಗಳ ಬ್ರಹ್ಮನಂತೆ ಜ್ಞಾನರೂಪವೂ ಆನಂದರೂಪವೂ ಎಂದು ಸಿದ್ಧಿಸುತ್ತದೆ.

ಅದ್ವೈತಸಿದ್ಧಿ ಗ್ರಂಥದಲ್ಲಿ ಶೂನ್ಯವು ಸತ್ವರಹಿತ ಜ್ಞಾನಾನಂದರೂಪವು ಎಂದು ಹೇಳಿದ್ದಾರಾದಕಾರಣ, ಶೂನ್ಯಕ್ಕೆ ಸತ್ಯತ್ವವನ್ನು ಹೇಗೆ ಬೌದ್ಧರು ಒಪ್ಪುತ್ತಾರೆಂಬುವದು ಸಿದ್ಧಿಸುತ್ತದೆ ಎಂಬ ಆಕ್ಷೇಪವು ಸರಿಯಲ್ಲ. ಯಾಕಂದರೆ "ಸತ್ಯಂಚ ಪರಮಾರ್ಥತಃ" ಮೊದಲಾದ ಬೌದ್ಧರವಾಕ್ಯಗಳಿಂದ "ಶೂನ್ಯವಾದಿನಾಮಪಿ ಶೂನ್ಯತಾಯಾಃ ಸತ್ಯತ್ವಾತ್" ಇವೇ ಮೊದಲಾದ ಅದ್ವೈತಗ್ರಂಥಗಳಿಂದ ಶೂನ್ಯವು ಸತ್ಯರೂಪವಾದದ್ದು ಎಂದು ಸಿದ್ಧಿಸುತ್ತದೆ. ಆದ್ದರಿಂದ ಆ ವಿಷಯದಲ್ಲಿ ಅದ್ವೈತಸಿದ್ಧಿಕಾರರ ವಾಕ್ಯವು ಗ್ರಾಹ್ಯವಲ್ಲ.

"ನಿರ್ವಿಶೇಷಂ ಸ್ವಯಂ ಭಾತಂ ನಿರ್ಲೇಪಮಜರಾಮರಂ । ಶೂನ್ಯಂ ತತ್ತ್ವಮವಿಜ್ಞೇಯಂ ಮನೋವಾಚಾಮಗೋಚರಂ" ಎಂಬ ಬೌದ್ಧರ ವಾಕ್ಯದಿಂದ ಶೂನ್ಯವು ಅದ್ವೈತಿಗಳ ಬ್ರಹ್ಮನಂತೆ ಅಜ್ಞೇಯವೂ, ಅವಾಚ್ಯವೂ, ಎಂದು ಸಿದ್ಧಿಸುತ್ತದೆ. ಆದುದರಿಂದ ಅದ್ವೈತಿಗಳ ಬ್ರಹ್ಮನಂತೆ ಬೌದ್ಧರ ಶೂನ್ಯವು ನಿರ್ವಿಶೇಷವು, ಸತ್ಯವೂ, ಜ್ಞಾನರೂಪವೂ, ಆನಂದರೂಪವೂ, ಅಜ್ಞೇಯವೂ, ಅವಾಚ್ಯವೂ, ಆದಕಾರಣ ಬ್ರಹ್ಮ, ಶೂನ್ಯ ಎಂದು ಹೆಸರುಮಾತ್ರ ಬೇರೆಯೇ ಹೊರತು ಬ್ರಹ್ಮವು ಶೂನ್ಯದ ದೆಸೆಯಿಂದ ಭಿನ್ನವಾದದ್ದು ಅಲ್ಲ.

ಅದ್ವೈತಿಗಳು ತಮ್ಮ ಬ್ರಹ್ಮನು ನಿರ್ವಿಶೇಷನು (ಸಕಲ ಧರ್ಮರಹಿತನು) ಎಂದು ಒಪ್ಪುತ್ತಾರೆ. ಮತ್ತು "ನಾಮವಾ ಕರ್ಮವಾ ಭೇದೋವಾ ನ ಬ್ರಹ್ಮಣ್ಯಸ್ತಿ" ಎಂದು ನಾಮಭೇದವೂ ತಮ್ಮ ಬ್ರಹ್ಮನಲ್ಲಿ ಇಲ್ಲವೆಂದು ಕಂಠತಃ ಹೇಳಿದ್ದಾರಾದ ಪ್ರಯುಕ್ತ ಅದ್ವೈತಿಗಳ ಬ್ರಹ್ಮನಲ್ಲಿ ಶೂನ್ಯದ ದೆಸೆಯಿಂದ ಭೇದ ಬರುವ ಸಂಭವವು ಇಲ್ಲವಾದ್ದರಿಂದ ಅದ್ವೈತಿಗಳ ಬ್ರಹ್ಮನೂ ಬೌದ್ಧರ ಶೂನ್ಯವೂ ಒಂದೇ ಆದದ್ದೆಂದು ಕೋರ್ಟಿನವರು ನಿರ್ಣಯಮಾಡುತ್ತಾರೆ.

## ವೇದ ಮೊದಲಾದ ಜಗತ್ತಿನ ವಿಷಯದಲ್ಲಿ ನಿರ್ಣಯವು.

"ಅದ್ವೈತಿಗಳ ಮತದಲ್ಲಿ ವೇದಗಳನ್ನೂ ಒಪ್ಪಿ ವೇದಗಳಿಗೆ ಪ್ರಾಮಾಣ್ಯ ವನ್ನುಒಪ್ಪಿ ವೇದೋಕ್ತವಾದ ಬ್ರಾಹ್ಮಣಾದಿವರ್ಣಗಳನ್ನು ಬ್ರಹ್ಮಚರ್ಯಾದ್ಯಾ ಶ್ರಮಗಳನ್ನೂ ಒಪ್ಪಿ ಆ ಯಾ ವರ್ಣಾಶ್ರಮಗಳಿಗೆ ವೇದಗಳಿಂದ ವಿಹಿತವಾದ (ಹೇಳಲ್ಪಟ್ಟ) ಸ್ನಾನ, ಸಂಧ್ಯಾ, ಭಗವತ್ಪೂಜಾ, ಯಜ್ಞ, ದಾನ, ವೇದಾಧ್ಯಯನ ಗಳನ್ನು ಮಾಡುತ್ತ ಶುದ್ಧಾಂತಃಕರಣವುಳ್ಳವರಾಗಿ ಶ್ರವಣ, ಮನನ, ಧ್ಯಾನ ಮಾಡಿ ವೇದಾಂತ ಶಾಸ್ತ್ರಗಳಿಂದ ಬ್ರಹ್ಮಾಪರೋಕ್ಷ ಜ್ಞಾನವನ್ನು ಸಂಪಾ ದನ ಮಾಡಿಕೊಂಡು ಬ್ರಹ್ಮಭಾವರೂಪ ಮೋಕ್ಷವನ್ನು ಹೊಂದ ತಕ್ಕದ್ದು ಎಂದು ಹೇಳಿದೆ. ಆದಕಾರಣ ಅದ್ವೈತಿಗಳು ಆಸ್ತಿಕರು. ಬೌದ್ಧರ ಮತ ದಲ್ಲಿ ವೇದಗಳನ್ನು ಒಪ್ಪಿಲ್ಲಾ, ವೇದಕ್ಕೆ ಪ್ರಾಮಾಣ್ಯವನ್ನು ಒಪ್ಪಿಲ್ಲಾ, ವೇದೋಕ್ತವಾದ ಬ್ರಾಹ್ಮಣಾದಿವರ್ಣಗಳನ್ನು ಒಪ್ಪಿಲ್ಲಾ, ಬ್ರಹ್ಮಚರ್ಯಾ ದ್ಯಾಶ್ರಮಗಳನ್ನು ಒಪ್ಪಿಲ್ಲಾ, ಆಯಾ ವರ್ಣಾಶ್ರಮಗಳಿಗೆ ಹೇಳಲ್ಪಟ್ಟ ಯಜ್ಞಾದಿಗಳನ್ನು ಒಪ್ಪಿಲ್ಲವಾದ್ದರಿಂದ, ಬೌದ್ಧರು ನಾಸ್ತಿಕರು. ಇಂಥಾ ನಾಸ್ತಿಕರಾದ ಬೌದ್ಧರಮತವೂ ಆಸ್ತಿಕ ಶಿರೋಮಣಿಗಳಾದ ಅದ್ವೈತಿಗಳ ಮತವೂ ಒಂದೇ ಎಂಬುವದು ಯುಕ್ತವಲ್ಲ" ಎಂಬ ಪ್ರತಿವಾದಿಗಳ ಹೇಳುವಿ ಕೆಯು, ಸರ್ವವಿಷಯಗಳಲ್ಲಿ ಎರಡೂ ಮತಗಳು ಒಂದೇ ಆದ್ದರಿಂದ, ಯುಕ್ತ ವಾದದ್ದಲ್ಲವೆಂದು ಕೋರ್ಟಿನವರು ತೀರ್ಮಾನ ಮಾಡುತ್ತಾರೆ. ಹೇಗೆಂದರೆ ಆಸ್ತಿಕರು ಎಂದರೆ ಪರಲೋಕ ಉಂಟು, ಅದಕ್ಕೆ ಸಾಧನಗಳುಂಟು, ಫಲ ದಾತೃನಾದ ಈಶ್ವರನು ಉಂಟು ಎಂದು ತಿಳಿದು ಕೊಂಡು ಪರಲೋಕಪ್ರಾಪ್ತಿ ಗಾಗಿ ಕರ್ಮಗಳನ್ನು ಮಾಡುವವರು. ಪರಲೋಕ ಮೊದಲಾದದ್ದು ಇಲ್ಲ ವೆಂದು ತಿಳಿದುಕೊಂಡು ಪುಣ್ಯಕರ್ಮಗಳನ್ನು ಮಾಡದೇ ಇದ್ದವರು ನಾಸ್ತಿಕರು. ಅದ್ವೈತಿಗಳು ಅಸತ್ಯವಾದ ವೇದಾಂತ ವಾಕ್ಯಗಳಿಂದ ಸತ್ಯವಾದ ಬ್ರಹ್ಮವು ಹೇಗೆ ಸಿದ್ಧಿಸುತ್ತದೆ (ಬ್ರಹ್ಮ ಸೂತ್ರ ಶಾಂಕರ ೨-೧-೧೪) ಇವೇ ಮೊದಲಾದ

---

ಕಥಂತ್ವಸತ್ಯೇನ ವೇದಾಂತ ವಾಕ್ಯೇನಸತ್ಯಸ್ಯ ಬ್ರಹ್ಮಾತ್ಮತ್ವಸ್ಯ ಪ್ರತಿ ಪತ್ತಿಃ (ಶಾಂಕರ)

ಶಂಕರಾಚಾರ್ಯರ * ವಾಕ್ಯದಿಂದಲೂ "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ" ಎಂಬ ವಾಕ್ಯದಿಂದ ಸ್ವರ್ಗಕ್ಕೆ ಜ್ಯೋತಿಷ್ಟೋಮಯಾಗವು ಕಾರಣವು ಎಂದು ತಿಳಿದುಕೊಂಡು ಯಾಗಮಾಡಿ ಹೊಂದುವ ಸ್ವರ್ಗಾದಿ ಫಲವು, ಸ್ವಪ್ನದಲ್ಲಿ ಕಲ್ಪಿಸಿದ "ಜ್ಯೋತಿಷ್ಟೋಮೇನ" ಎಂಬ ಶ್ರುತಿಯಿಂದ ಸ್ವರ್ಗಕ್ಕೆ ಜ್ಯೋತಿಷ್ಟೋಮಯಾಗವು ಕಾರಣವೆಂದು ತಿಳಿದುಕೊಂಡು ಸ್ವಪ್ನದಲ್ಲಿಮಾಡಿದ ಯಜ್ಞದಿಂದ ಹೊಂದಿದ ಸ್ವರ್ಗ ಫಲದಂತೆ ಸುಳ್ಳಾದದ್ದು; ಆಕಾಶ, ಸೃಷ್ಟಿ ಮುಂತಾದ್ದು ಶಶವಿಷಾಣದಂತೆ ಸುಳ್ಳಾದದ್ದು" ಎಂದು ಸಿದ್ಧಾಂತಲೇಶ ಸಂಗ್ರಹವೆಂಬ ಗ್ರಂಥದಲ್ಲಿ ಅದರ ವ್ಯಾಖ್ಯಾನದಲ್ಲಿ ಹೇಳಿರೋಣವರಿಂದಲೂ,

ಜಾಗ್ರತ್ಕಾಲೀನ ಯಾವತ್ತು ವಸ್ತುಗಳು ಕಲ್ಪಿತವಾದರೆ, ಸ್ವಪ್ನಪದಾರ್ಥಕ್ಕೂ, ಜಗತ್ತಿಗೂ ಏನು ವೈಲಕ್ಷಣ್ಯವು? ಎರಡೂ ಕಲ್ಪಿತವಷ್ಟೇ ಎಂಬ ಸಂಕ್ಷೇಪ

---

* ಕಥಂ ತ್ವಸತ್ಯೇನವಾಕ್ಯೇನ ಸತ್ಯಸ್ಯ ಬ್ರಹ್ಮಾತ್ಮತ್ವಸ್ಯ ಸಿದ್ಧಿಃ (ಬ್ರ. ಸೂ. ಶಾ. ೨|೧|೧೪)

೧. ಜ್ಯೋತಿಷ್ಟೋಮಾದಿ ಶ್ರುತಿಬೋಧಿತಾನುಷ್ಠಾನಾತ್ಫಲಸಿದ್ಧಿಃ ಸ್ವಾಪ್ನಶ್ರುತಿ ಬೋಧಿತಾನುಷ್ಠಾನ ಪ್ರಯುಕ್ತ ಫಲಸಂವಾದತುಲ್ಯಾ (ಸಿದ್ಧಾಂತಲೇಶ ಸಂಗ್ರಹ)

೨. ಸ್ವಪ್ನೇಕಶ್ಚಿತ್ಕದಾಚಿತ್ ಜ್ಯೋತಿಷ್ಟೋಮಾದಿಶ್ರುತಿಂ ಕಲ್ಪಯಿತ್ವಾತತಃ ಸಾಧನವಿಶೇಷ ಮುಪಲಭ್ಯ ತದನುಷ್ಠಾನಾತ್ಫಲಂ ಲಭತೇ ·ತತ್ತುಲ್ಯಂ ಜಾಗರಣೇಽಪಿ ಸ್ವರ್ಗಾದಿ ಫಲ ಲಂಭನಂ "ವಿಯದಾದಿ ಸೃಷ್ಟಿತತ್ ಕ್ರಮಾದೇಃ ಶಶಶೃಂಗಾಯಮಾಣತ್ವಂ" (ಸಿ. ಸ. ವ್ಯಾ)

೩. ನಸುಕಲ್ಪಿತಂ ಯದಿ ಜಾಗರಿತಂ ವದಕೀದೃಸೀ ಖಲುವಿಲಕ್ಷಣತಾ। ಸ್ವಪನಾದಮುಷ್ಯಭವತೋಽಭಿಮತಾ ಪರಿಕಲ್ಪಿತತ್ವ ಮುಭಯೋಸ್ತುಸಮಃ (ಸಂಕ್ಷೇಪ ಶಾ. ೨।೩೩)

೪. ಸ್ವಪ್ನಮಾಯಾ ಯಥಾದೃಷ್ಟೇ ಗಂಧರ್ವನಗರಂಯಥಾ। ತಥಾವಿಶ್ವಮಿದಂದೃಷ್ಟಂ ವೇದಾಂತೇಷು ವಿಚಕ್ಷಣೈಃ। ನನಿರೋಧೋ ನಚೋತ್ಪತ್ತಿಃ ನಬದ್ಧೋನಚ ಸಾಧಕಃ। ನಮುಮುಕ್ಷುರ್ನವೈಮುಕ್ತಃ (ಗೌ. ಕಾರಿಕ) ಗಂಧರ್ವನಗರಂ ದೃಶ್ಯಮಾನಮೇವಸನ್ ಅಕಸ್ಮಾದ ಭಾವತಾಂಗತಂ ದೃಷ್ಟಂ ಯಥಾಚ ಸ್ವಪ್ನಮಾಯೆ ದೃಷ್ಟೆ ಅಸದ್ರೂಪೆ ತಥಾ ವಿಶ್ವಮಿದಂ ದ್ವೈತಂ ಸಮಸ್ತಮಸತ್ದೃಷ್ಟಂ ...... ದ್ವೈತಸ್ಯಾಸತ್ವಾತ್ (ಗೌ. ಶಾ. ಭಾ.)

ಶಾರೀರಕ ವಾಕ್ಯಗಳಿಂದಲೂ ಸ್ವಪ್ನಪದಾರ್ಥವೂ ಮಾಯಾಕಲ್ಪಿತ ಪದಾರ್ಥವೂ ಗಂಧರ್ವನಗರವೂ ಹೇಗೆ ಅಸತ್ಯವಾದದ್ದೋ ಹಾಗೆಯೇ ಈ ಸಮಸ್ತ ಜಗತ್ತು ಅಸತ್ಯವಾದದ್ದು, ಉತ್ಪತ್ತಿಯಿಲ್ಲ, ನಾಶವಿಲ್ಲ, "ಬದ್ಧ" ಸಂಸಾರಿ ಜೀವನು ಇಲ್ಲ, ಮೋಕ್ಷ ಸಾಧನಮಾಡುವ ಮನುಷ್ಯನು ಇಲ್ಲ, ಮೋಕ್ಷವನ್ನು ಇಚ್ಛಾಮಾಡುವ ಮನುಷ್ಯನಿಲ್ಲ, ಮುಕ್ತನಿಲ್ಲ, ಸರ್ವಪ್ರಪಂಚವೂ ಅಸತ್ಯವಾದದ್ದು ಎಂದು ಗೌಡ ಪಾದಾಚಾರ್ಯರ ಕಾರಿಕೆಯಿಂದಲೂ ಅದಕ್ಕೆ ವ್ಯಾಖ್ಯಾನಮಾಡಿದ ಶಂಕರಾಚಾರ್ಯರು ಮೊದಲಾದ ಅದ್ವೈತಿಗಳ ವಾಕ್ಯಗಳಿಂದಲೂ ಸಮಸ್ತ ಜಗತ್ತೂ ಸ್ವಪ್ನದಂತೆ, ಗಂಧರ್ವನಗರದಂತೆ ಅಸತ್ಯವಾದದ್ದು ಎಂದು ಅದ್ವೈತಿಗಳು ಒಪ್ಪುತ್ತಾರೆಂದು ತಿಳಿದು ಬರುತ್ತದೆ.

ಯಥಾಮಾಯಾ ಯಥಾಸ್ವಪ್ನೋ ಗಂಧರ್ವನಗರಂಯಥಾ |
ತಥೋತ್ಪಾದಸ್ತಥಾಸ್ಥಾನಂ ತಥಾಭಂಗ ಉದಾಹೃತಃ |

ಇವೇ ಮೊದಲಾದ ಬೌದ್ಧರ ಅನೇಕ ವಾಕ್ಯಗಳಿಂದ ಜಗತ್ತು ಸ್ವಪ್ನದಂತೆ ಗಂಧರ್ವನಗರದಂತೆ ಅಸತ್ಯವಾದದ್ದು ಎಂದು ಬೌದ್ಧರು ಒಪ್ಪುತ್ತಾರೆಂದು ತಿಳಿದು ಬರುತ್ತದೆ.

ಅದ್ವೈತಿಗಳು ಸ್ವಪ್ನದಂತೆ ಮರುಮರೀಚಿಕೆ, (ಬಿಸಲುಕುದರೆ) ಯಂತೆ ಪರಲೋಕಾದಿ ಜಗತ್ತೂ ಅದಕ್ಕೆ ಸಾಧನಗಳೂ ಅಸತ್ಯವಾದದ್ದು ನಮ್ಮಿಂದ ಗಂತವ್ಯಲೋಕ (ಹೊಂದಲಿಕ್ಕೆ ಯೋಗ್ಯವಾದಲೋಕ) ವಿಲ್ಲಾ ನಮ್ಮಿಂದ ಕರ್ತವ್ಯವಾದ ಕರ್ಮಗಳು ಇಲ್ಲ, ಶ್ರೋತವ್ಯ ವಸ್ತು ಇಲ್ಲ, ವಿಚಾರಮಾಡತಕ್ಕ ವಸ್ತು ಇಲ್ಲ. ಎಂದು ಮನಸ್ಸಿನಲ್ಲಿ ಇಟ್ಟುಕೊಂಡು (ಗಜೋಪಿಮಿಥ್ಯಾ ಪಲಾಯನಮಪಿ ಮಿಥ್ಯಾ) ಗಜವೂ ಸುಳ್ಳು ಪಲಾಯನವೂ ಸುಳ್ಳು ಎಂದುಹೇಳುವ ಪ್ರಕಾರ ಸ್ನಾನ, ಸಂಧ್ಯಾ, ಯಜ್ಞ, ವೇದಾಧ್ಯಯನ, ಮೊದಲಾದ ಕರ್ಮಗಳನ್ನು ಮಾಡುವವರಂತೆ ತೋರಿಸುತ್ತಾರೆಯೋ ಅದರಂತೆ ಬೌದ್ಧರು ಕೂಡಾ ಸ್ವರ್ಗಾದಿ ಪರಲೋಕಗಳು ಅವುಗಳಿಗೆ ಸಾಧನಗಳು ಮಿಥ್ಯಾ (ಸುಳ್ಳು) ಎಂದು ತಿಳಿದುಕೊಂಡಾಗ್ಯೂ "ನಹಿಸ್ವಪ್ನ ಸುಖಾದ್ಯರ್ಥಂ ಧರ್ಮಕಶ್ಚಿತ್ಪ್ರವರ್ತತೆ" "ನಾಸ್ತಿಕ್ಯ ಪರಿಹಾರಾರ್ಥಂ" ಎಂದು ವಾರ್ತಿಕಕಾರರು ಹೇಳಿದಪ್ರಕಾರ ಆಸ್ತಿಕ ಜನ ವಂಚನಾರ್ಥವಾಗಿ "ಸ್ವರ್ಗಕಾಮಶ್ಚೈತ್ಯಂ ವಂದೇತ" ಎಂಬ ವಾಕ್ಯಗಳಲ್ಲಿ ಹೇಳಿದಪ್ರಕಾರ ಸ್ವರ್ಗಾರ್ಥವಾಗಿ ಕರ್ಮವನ್ನು ಮಾಡುವವರಂತೆ ತೋರಿಸುತ್ತಾರೆ. ಆದ್ದರಿಂದ ಜಗತ್ತಿನ ವಿಷಯದಲ್ಲಿ ಈ ಎರಡೂ ಮತಗಳು ಒಂದೇ ಅದ್ದರಿಂದ ಒಬ್ಬರು (ಅದ್ವೈತಿಗಳು) ಆಸ್ತಿಕರು, ಬೌದ್ಧರು ನಾಸ್ತಿಕರು ಎಂದು

ಹೇಳಲು ಶಕ್ಯವಿಲ್ಲವಾದಕಾರಣ ಎರಡೂ ಮತಗಳು ನಾಸ್ತಿಕಮತಗಳೇ, ಉಭಯರೂ ನಾಸ್ತಿಕರೇ, ಎಂದು ಕೋರ್ಟನವರು ತೀರ್ಮಾನಮಾಡುತ್ತಾರೆ.

ಅದ್ವೈತಿಗಳು ವೇದವು ಪ್ರಮಾಣವೆಂದು ಒಪ್ಪುತ್ತಾ ಆ ವೇದಗಳಿಂದ ಹೇಳಿಸಿ ಕೊಳ್ಳಲ್ಪಡುವ ಪರಲೋಕ ಮುಂತಾದ ಜಗತ್ತು ವ್ಯಾವಹಾರಿಕ ಸತ್ಯವಾದದ್ದೆಂದು ಒಪ್ಪುತ್ತಾರೆ. ಬೌದ್ಧರು ವೇದವು ಪ್ರಮಾಣವೆಂದು ಒಪ್ಪುವದಿಲ್ಲ, ವೇದಾದಿ ಪ್ರಮಾಣಗಳಿಂದ ಹೇಳಿಸಿಕೊಳ್ಳಲ್ಪಡುವ ಪರಲೋಕಾದಿಗಳು ವ್ಯಾವಹಾರಿಕ ಸತ್ಯವೆಂದು ಒಪ್ಪುವುದಿಲ್ಲ. ಆದಕಾರಣ ಬೌದ್ಧರು ನಾಸ್ತಿಕರು ಅದ್ವೈತಿಗಳು ಆಸ್ತಿಕರು ಎಂದು ಪ್ರತಿವಾದಿಗಳು ಹೇಳುವ ಕಾರಣವೂ ಸರಿಯಾದುದಲ್ಲವೆಂದು ಕೋರ್ಟನವರು ನಿರ್ಣಯ ಮಾಡುತ್ತಾರೆ. ಕಾರಣ:–

ಅದ್ವೈತಿಗಳು ಹೇಗೆ ಪರಲೋಕಾದಿಗಳು ವ್ಯಾವಹಾರಿಕಸತ್ಯವೆಂದು ಒಪ್ಪುತ್ತಾರೋ ಹಾಗೆಯೇ ಬೌದ್ಧರುಕೂಡ ಪರಲೋಕಾದಿಗಳು ವ್ಯಾವಹಾರಿಕ ಸತ್ಯವೆಂದು ಒಪ್ಪುತ್ತಾರೆ ಎಂಬುವದು "ದ್ವೇಸತ್ಯೇಸಮುಪಾಶ್ರಿತ್ಯ" ಇವೇ ಮೊದಲಾದ ಬೌದ್ಧರ ವಾಕ್ಯಗಳಿಂದಲೂ "ನಾಸ್ತಿಕ್ಯ ಪರಿಹಾರಾರ್ಥಂ ಸಂವೃತಿಃ ಕಲ್ಪಿತೇತಿಚ" ಇವೇ ಮೊದಲಾದ ವಾರ್ತಿಕಕಾರರ ವಾಕ್ಯಗಳಿಂದಲೂ "ಯದ್ಯುಚ್ಯೇತ" ಇತ್ಯಾದಿ ಭಾಮತಿ ವಾಕ್ಯಗಳಿಂದಲೂ ಸಿದ್ಧಿಸುತ್ತದೆ. ಆದ್ದರಿಂದ ಅದ್ವೈತಿಗಳು ಪರಲೋಕಾದಿಗಳನ್ನು ವ್ಯಾವಹಾರಿಕ ಸತ್ಯವೆನ್ನುತ್ತಾರೆ. ಬೌದ್ಧರು ವ್ಯಾವಹಾರಿಕ ಸತ್ಯವೆಂಬುವದಿಲ್ಲವೆಂದು ಆ ಎರಡುಮತಗಳಿಗೆ ವೈಷಮ್ಯ ಹೇಳುವದು ಯುಕ್ತವಲ್ಲ.

ಮಗನು ಇದ್ದರೆ ಲಗ್ನಮಾಡತಕ್ಕದ್ದು, ಮಗನೇ ಇಲ್ಲದೆ ಹೋದಮೇಲೆ ಮಗನಿಗೆ ಲಗ್ನಮಾಡುತ್ತೇನೆ ಎಂಬುವದು ಹೇಗೆ ಕೂಡುವದಿಲ್ಲವೋ, ಹಾಗೆಯೇ ವೇದವೇ ಮೃಗತೃಷ್ಣದಂತೆ ಅಸತ್ಯವಾದದ್ದು ಎಂದು ಹೇಳಿದಮೇಲೆ ಆವೇದಕ್ಕೆ ಪ್ರಾಮಾಣ್ಯವು ಉಂಟು ಎಂಬುವದು ಹೇಗೆಕೂಡುತ್ತದೆ? (ಕೂಡುವದಿಲ್ಲ) ಆದ್ದರಿಂದ ಅದ್ವೈತಿಗಳು ವೇದವು ಪ್ರಮಾಣವೆನ್ನುತ್ತಾರೆ, ಬೌದ್ಧರು ಪ್ರಮಾಣವೆಂದು ಹೇಳುವದಿಲ್ಲವಾದ್ದರಿಂದ, ಈ ವಿಷಯದಲ್ಲಿ ಈ ಎರಡೂ ಮತಗಳಿಗೆ ಭೇದ ಉಂಟು ಎಂದು ಪ್ರತಿವಾದಿಯು ಹೇಳುವದು ಯುಕ್ತವಲ್ಲ. ಪ್ರಮಾಣಗಳು ತಮ್ಮ ತಮ್ಮ ವಿಷಯಗಳನ್ನು ಪಾರಮಾರ್ಥಿಕ ಸತ್ಯವಾದವುಗಳೇ ಎಂದು ಗ್ರಹಿಸುತ್ತವೆ. ವ್ಯಾವಹಾರಿಕ ಸತ್ಯವಾದವುಗಳೆಂದು ಗ್ರಹಿಸುವದಿಲ್ಲ ಎಂದು ಶಂಕರಭಾಷ್ಯ ಭಾಮತಿ ವಾಕ್ಯಗಳಲ್ಲಿ ಹೇಳಿರೋಣದರಿಂದ ವೇದಾದಿ ಪ್ರಮಾಣಗಳಿಂದ ಹೇಳಿಸಿಗೊಳ್ಳಲ್ಪಟ್ಟ ಸ್ವರ್ಗಾದಿ ಪರಲೋಕಗಳು ವೇದ, ಯಜ್ಞ, ತೀರ್ಥ, ದೇವತೆಗಳು

ಕರ್ತೃತ್ವ, ಭೋಕ್ತೃತ್ವ ಮೊದಲಾದ ಜಗತ್ತು ವ್ಯಾವಹಾರಿಕ ಸತ್ಯವಾದದ್ದು ಎಂದು ಅದ್ವೈತಿಗಳು ಹೇಳುವದು ತಮ್ಮ ಮಾತುಗಳಿಗೆ ವಿರುದ್ಧ ಒಪ್ಪಿದಂತೆ ಆಗುತ್ತದೆ. ಪ್ರಮಾಣಶಬ್ದದಲ್ಲಿ ಇರುವ ಪ್ರ–ಮಾ–ಅನ, ಎಂಬ ಮೂರು ಭಾಗಗಳಲ್ಲಿ ಪ್ರ = ಎಂದರೆ ಪಾರಮಾರ್ಥಿಕ ಸತ್ಯವಾದ ವಸ್ತುವನ್ನು ವಿಷಯೀಕರಿಸುವ, ಮಾ = ಅಂದರೆ ಜ್ಞಾನವನ್ನು, ಅನ = ಅಂದರೆ ಹುಟ್ಟಿಸುವದು (ಪ್ರಮಾಣವೆಂದರೆ ಪಾರಮಾರ್ಥಿಕ ಸತ್ಯವಾದ ವಸ್ತುವನ್ನು ವಿಷಯೀಕರಿಸುವ ಜ್ಞಾನವನ್ನು ಹುಟ್ಟಿಸುವದು = ಪ್ರಮಾಣಗಳಿಂದ ಹುಟ್ಟಿದ ಜ್ಞಾನದಿಂದ ಗೃಹೀತವಾದ ವಸ್ತುವು ಪರಮಾರ್ಥ ಸತ್ಯವಾದದ್ದು) ಎಂದು ಪ್ರಮಾಣ ಶಬ್ದಕ್ಕೆ ಅರ್ಥವಿರೋಣದರಿಂದ ವ್ಯಾವಹಾರಿಕ ಸತ್ಯವೆಂದರೆ ಶುಕ್ತಿರಜತದಂತೆ ಬಾಧ್ಯವಾದದ್ದು (ಮೂರುಕಾಲದಲ್ಲಿಯೂ ಇಲ್ಲದೇ ಇರುವದು) ಎಂದು ಅರ್ಥವು ಎಂದು ಅಪ್ಪೇಯದೀಕ್ಷಿತರು ಮೊದಲಾದವರ ವಾಕ್ಯದಿಂದ ಸಿದ್ಧಿಸುತ್ತದೆ. ಆದ್ದರಿಂದ ಪರಲೋಕಾದಿಗಳನ್ನು ವ್ಯಾವಹಾರಿಕ ಸತ್ಯವೆಂದರೆ ಬಾಧ್ಯವೇ (ಮೂರುಕಾಲ ಇಲ್ಲದೆ ಇರುವದೇ) ಎಂದು ಸಿದ್ಧಿಸಿ ಅಂಥಾ ವ್ಯಾವಹಾರಿಕ ಸತ್ಯವಾದ ಪರಲೋಕಾದಿಗಳನ್ನು ಹೇಳುವ ವೇದಾದಿಗಳು ಪ್ರಮಾಣಗಳು, ಪಾರಮಾರ್ಥಿಕ ಸತ್ಯವಾದ ಪದಾರ್ಥಗಳನ್ನು ತಿಳಿಸಿಕೊಡತಕ್ಕವುಗಳಲ್ಲ ಅಪ್ರಮಾಣವೇ ಎಂದು ಸಿದ್ಧಿಸುವಕಾರಣ "ಅದ್ವೈತಿಗಳು ವೇದವನ್ನು ಒಪ್ಪಿ ಅವುಪ್ರಮಾಣವೆಂದು ಒಪ್ಪುತ್ತಾರೆ. ಬೌದ್ಧರು ವೇದವನ್ನು ಒಪ್ಪುವದಿಲ್ಲ ಅವುಗಳಿಗೆ ಪ್ರಾಮಾಣ್ಯವನ್ನು ಒಪ್ಪುವದಿಲ್ಲ" ಎಂಬ ಭೇದವು ಅಯುಕ್ತವಾದದ್ದು ಎಂದು ಕೋರ್ಟಿನವರು ತೀರ್ಮಾನ ಮಾಡುತ್ತಾರೆ.

ಅದ್ವೈತಮತದ ಪ್ರಕಾರ ಬ್ರಹ್ಮಾಪರೋಕ್ಷ ಜ್ಞಾನವನ್ನು ಸಂಪಾದನೆ ಮಾಡಿಕೊಂಡು ಆನಂದರೂಪನಾದ ಬ್ರಹ್ಮರೂಪನು ಆಗುತ್ತಾ, ಆ ಬ್ರಹ್ಮಾನಂದವನ್ನು ಅನುಭವಿಸುತ್ತಾನೆ.

ಬೌದ್ಧಮತದಪ್ರಕಾರ ಶೂನ್ಯಾಪರೋಕ್ಷವನ್ನು ಹೊಂದಿ ಶೂನ್ಯರೂಪನಾಗುತ್ತಾನೆ ಆದ್ದರಿಂದ ಎರಡು ಮತಗಳಿಗೂ ಭೇದ ಉಂಟು ಎಂದು ಅದ್ವೈತಿಗಳು ಹೇಳುವದು ಯುಕ್ತವಲ್ಲ.

ಕಾರಣ ಹೇಗೆ ಬ್ರಹ್ಮನು ಆನಂದರೂಪನು, ಜ್ಞಾನರೂಪನು ಎಂದು ಅದ್ವೈತಿಗಳು ಹೇಳುತ್ತಾರೆಯೋ ಹಾಗೆಯೇ ಬೌದ್ಧರು ತಮ್ಮ ಶೂನ್ಯವು ಜ್ಞಾನರೂಪವು ಆನಂದರೂಪವು ಎಂದು ಹೇಳುತ್ತಾರೆ. ಅದ್ವೈತಿಗಳು ಮೋಕ್ಷಾವಸ್ಥೆಯಲ್ಲಿ ಜೀವನು ಆನಂದರೂಪನಾದ ಬ್ರಹ್ಮನಾಗುತ್ತಾನೆಯೇ ಹೊರ್ತು ಆನಂದ

ವನ್ನು ಅನುಭವಿಸುವುದಿಲ್ಲವೆಂದು ಹೇಳುತ್ತಾರೆ.

ಬೌದ್ಧರೂಕೂಡ ಜೀವನು ಮೋಕ್ಷಾವಸ್ಥೆಯಲ್ಲಿ ಆನಂದರೂಪವಾದ ಶೂನ್ಯರೂಪನಾಗುತ್ತಾನೆ ಎಂದು ಹೇಳುತ್ತಾರಾದಕಾರಣ ಮೋಕ್ಷಾವಸ್ಥೆಯಲ್ಲಿಯೂ ಅದ್ವೈತಮತಕ್ಕೂ ಬೌದ್ಧಮತಕ್ಕೂ ಭೇದವಿಲ್ಲ. ಈ ಪ್ರಕಾರ ಸರ್ವ ವಿಷಯದಲ್ಲಿಯೂ ಅದ್ವೈತಮತವೂ ಶೂನ್ಯವೇ ತತ್ವವೆಂದು ಹೇಳುವ ಅವೈದಿಕವಾದ ಬೌದ್ಧಮತವೂ ಒಂದೇ ಆದದ್ದು.

---

## ವಿಜ್ಞಾನವಾದಿಗಳಾದ ಬೌದ್ಧರ ಮತ್ತು ಅದ್ವೈತಿಗಳ ಮತ ವಿಷಯಗಳಲ್ಲಿ ತೀರ್ಮಾನವು.

---

ಜಗತ್ತು ಪ್ರತ್ಯಕ್ಷ ಮೊದಲಾದ ಪ್ರಮಾಣಗಳಿಂದ ತೋರುತ್ತಾ ಇರಲು ಆರಂಭದಲ್ಲಿಯೇ ಸರ್ವವೂ ಶೂನ್ಯವೇ ಎಂದು ಹೇಳಲು, ಕೆಲವು ಮೂಢರಾದ ಶಿಷ್ಯರಿಗೆ ಈ ಮತವು ಮನಸ್ಸಿಗೆ ಬರಲಿಕ್ಕಿಲ್ಲವೆಂದು ಜಗತ್ತು ಸತ್ಯವು, ಕ್ಷಣಿಕವಾದದ್ದು ಎಂದು ಹೇಳುತ್ತಾ ಕೊನೆಗೆ ಶೂನ್ಯವಾದದಲ್ಲಿಯೇ ಪರ್ಯವಸಾನ ಮಾಡುತ್ತಾರೆ.

ಮಧ್ಯಮ ಶಿಷ್ಯರನ್ನು ಕುರಿತು ವಿಜ್ಞಾನ ಒಂದೇ ತತ್ವವು, ಆ ವಿಜ್ಞಾನದಲ್ಲಿಯೇ ಸರ್ವಜಗತ್ತು ಕಲ್ಪಿತವಾದದ್ದು ಎಂದು ಹೇಳುತ್ತಾ ಶೂನ್ಯವಾದದಲ್ಲೇ ಪರ್ಯವಸಾನಮಾಡುತ್ತಾರೆ.

ಉತ್ತಮ ಶಿಷ್ಯರನ್ನು ಕುರಿತು ಆರಂಭದಲ್ಲಿಯೇ ಶೂನ್ಯವು ಒಂದೇ ತತ್ವವು. ಆ ಶೂನ್ಯದಲ್ಲಿ ಯಾವತ್ತಾ ಜಗತ್ತು ಕಲ್ಪಿತವಾದದ್ದು ಎಂದು ಹೇಳುತ್ತಾರೆ. ಎಂದು ಬೌದ್ಧರ "ದೇಶನಾಲೋಕನಾಥಾನಾಂ" ಇವೇ ಮೊದಲಾದ ಗ್ರಂಥಗಳಿಂದ ಹಾಗೂ "ವಿನೇಯ ಭೇದಾದ್ವಾ" ಶಂಕರಭಾಷ್ಯ ತಥಾ "ಹೀನ ಮಧ್ಯಮೋತ್ಕೃಷ್ಟಧಿಯಃ" ಇವೇ ಮೊದಲಾದ ಭಾಮತಿ ಎಂಬ (ಬ್ರಂ ೨।೨।೧೮) ಗ್ರಂಥಗಳಿಂದ ಸಿದ್ಧವಾಗೋಣದರಿಂದ ಬೌದ್ಧರಿಗೆ ಶೂನ್ಯವಾದದಲ್ಲಿಯೇ ಮುಖ್ಯತಾತ್ಪರ್ಯ ಉಂಟು ಎಂದು ಸಿದ್ಧಿಸುತ್ತದೆ. ಅದ್ವೈತಮತವೂ ಶೂನ್ಯವಾದಿಮತವೂ ಒಂದೇ ಆದಮೇಲೆ ಅದ್ವೈತಮತವು ವಿಜ್ಞಾನವಾದಿಗಳಾದ ಬೌದ್ಧಮತವೇ ಆಗುತ್ತದೆ. ಇಷ್ಟು ಅಲ್ಲದೆ—

ವಿಜ್ಞಾನ (ಬ್ರಹ್ಮ) ಒಂದು ತತ್ವವು. ಆ ವಿಜ್ಞಾನದಲ್ಲಿ ಸಮಸ್ತ ಜಗತ್ತು ಕಲ್ಪಿತವಾದದ್ದು. ಎಂದು ಅದ್ವೈತಮತದವರು, ವಿಜ್ಞಾನ ಒಂದು ತತ್ವವು

ಆ ವಿಜ್ಞಾನದಲ್ಲಿ ಸಮಸ್ತ ಜಗತ್ತು ಕಲ್ಪಿತವಾದದ್ದು. ಎಂದು ಬೌದ್ಧಮತದವರು ಸ್ವೀಕಾರಮಾಡಿದ್ದಾರೆಂದು (೧) ಗೌಡಪಾದೀಯಕಾರಿಕಾ, (೨) ಶಂಕರಭಾಷ್ಯವು, (೩) ಆನಂದಗಿರಿ ಟೀಕಾ ಮತ್ತು (೪) ಮಿತಾಕ್ಷರ, (೫). ಗೌಡಪಾದೀಯ ವಿವೇಕ (೬) ಪಂಚಪಾದಿಕ (೭) ವಿವರಣ (೮) ಸಂಕ್ಷೇಪಶಾರೀರಕ ಶಂಕರವಿಜಯ ಮೊದಲಾದ ಅದ್ವೈತಿಗಳ ಗ್ರಂಥಗಳಿಂದ ತಿಳಿದು ಬರುತ್ತದೆ. ಆದುದರಿಂದ ಅದ್ವೈತಮತವು . ವಿಜ್ಞಾನವಾದಿಗಳಾದ ಬೌದ್ಧರಮತವೇ ಎಂದು ಕೋರ್ಟಿನವರು ನಿರ್ಣಯಮಾಡುತ್ತಾರೆ

ವಿಜ್ಞಾನ ಒಂದೇ ತತ್ವವು. ಆ ವಿಜ್ಞಾನದಲ್ಲಿ ಸಮಸ್ತ ಜಗತ್ತು ಕಲ್ಪಿತವಾದದ್ದು ಎಂಬ ಅಂಶಗಳಲ್ಲಿ ಎರಡೂ ಮತಗಳಿಗೆ ಸಾಮ್ಯವಿದ್ದಾಗ್ಯೂ ಅದ್ವೈತರ ವಿಜ್ಞಾನವೂ (ಬ್ರಹ್ಮವೂ) ಉಪನಿಷತ್ತಿನಿಂದೇ ತಿಳಿಯಲಿಕ್ಕೆ ಯೋಗ್ಯವಾದದ್ದು, ಒಂದಾದದ್ದು (ಏಕತ್ವ ವುಳ್ಳದ್ದು) ನಿತ್ಯವಾದದ್ದು (ನಿತ್ಯತ್ವವುಳ್ಳದ್ದು).

ಬೌದ್ಧರ ವಿಜ್ಞಾನವು ಉಪನಿಷತ್ತಿನಿಂದ ತಿಳಿಯುಲಿಕ್ಕೆ ಯೋಗ್ಯವಲ್ಲ ಅನೇಕವಾದದ್ದು (ಅನೇಕತ್ವ ವುಳ್ಳದ್ದು) ಕ್ಷಣಿಕವಾದದ್ದು (ಕ್ಷಣಿಕತ್ವವುಳ್ಳದ್ದು) ಹೀಗೆ ಎರಡೂ ಮತತತ್ವಗಳಿಗೆ ಭೇದವು ಇರೋಣದರಿಂದ ಎರಡೂ ಮತಗಳು ಬೇರೆ ಆದದ್ದು ಎಂದು ಅದ್ವೈತಿಗಳು ಹೇಳುವದನ್ನು ಯುಕ್ತವಲ್ಲವೆಂದು ಕೋರ್ಟಿನವರು ನಿರಾಕರಣಮಾಡುತ್ತಾರೆ. ಕಾರಣ:-

ಬ್ರಾಹ್ಮಣಾದಿವರ್ಣ, ಬ್ರಹ್ಮಚರ್ಯಾದ್ಯಾಶ್ರಮ, ವೇದ, ವೇದಾಧ್ಯಯನ, ಯಜ್ಞ, ದೇವತೆಗಳು, ಭಗವತ್ಪೂಜಾ, ಕರ್ತೃತ್ವ, ಸ್ವರ್ಗಾದಿ ಪರಲೋಕಗಳು, ಯಾವತ್ತೂ ಜ್ಞಾನದಲ್ಲಿ ಕಲ್ಪಿತವು, ಜ್ಞಾನವಂದೇ ಸತ್ಯವು ಎಂದು ಬೌದ್ಧರಂತೆ ಅದ್ವೈತಿಗಳು ಒಪ್ಪಿದಮೇಲೆ, ಆ ಜ್ಞಾನ ನಿತ್ಯವಾದರೇನು, ಅನಿತ್ಯವಾದರೇನು, ಒಂದಾದರೇನು, ಅನೇಕವಾದರೇನು, ಆಸ್ತಿಕರಂತೆ ವೇದಾಧ್ಯಯನ, ಯಜ್ಞ, ಸ್ನಾನ, ಸಂಧ್ಯಾ, ಭಗವತ್ಪೂಜಾ, ಇವುಗಳನ್ನುಮಾಡುವದು ಅದ್ವೈತಿಗಳಿಗೆ ಕೂಡುವದಿಲ್ಲವಾದ್ದರಿಂದ ಅದ್ವೈತಿಗಳು ಬೌದ್ಧರಂತೆ ನಾಸ್ತಿಕರೇ ಅವೈದಿಕರೇ, ಆಗುತ್ತಾರಾದಕಾರಣ, ಜ್ಞಾನವು ನಿತ್ಯವು ಏಕತ್ವವುಳ್ಳದ್ದು, ಎಂದು ಅದ್ವೈತಿಗಳು ಹೇಳುವ ವಿಶೇಷವು ಅನುಪಯುಕ್ತವಾದದ್ದು.

ವಸ್ತುತಃ ವಿಚಾರಮಾಡಲಾಗಿ ಅದ್ವೈತಿಗಳಜ್ಞಾನವು ನಿರ್ವಿಶೇಷ ಭೇದ **ಮೊದಲಾದ (ಸಕಲಧರ್ಮ ರಹಿತವಾದದ್ದರಿಂದ,)** ಆಜ್ಞಾನದಲ್ಲಿ ಏಕತ್ವವು ಇಲ್ಲ, ನಿತ್ಯತ್ವವೂ ಇಲ್ಲ, ಉಪನಿಷದ್ವೇದ್ಯತ್ವವೂ ಇಲ್ಲ, ಬೌದ್ಧರ ಜ್ಞಾನದ ದರಿಂದ ಭೇದವು ಇಲ್ಲ. ಬೌದ್ಧರವಿಜ್ಞಾನವು ಸಹ ನಿರ್ವಿಶೇಷವಾದಕಾರಣ, ಆ ಜ್ಞಾನದಲ್ಲಿ

ಕ್ಷಣಿಕತ್ವವು ಇಲ್ಲ, ಅನೇಕತ್ವವು ಇಲ್ಲ. ಮತ್ತು ಸರ್ವಕಾಲವೃತ್ತಿತ್ವಂ (ಎಲ್ಲಾ ಕಾಲದಲ್ಲಿ ಇರೋಣ) ಎಂಬ ನಿತ್ಯತ್ವವು ಅನೇಕಪದಾರ್ಥಗಳಿಂದ ಯುಕ್ತವಾದದ್ದು (ಸಖಂಡವಾದದ್ದು) ಅದ್ವೈತರ ಬ್ರಹ್ಮರೂಪ ಜ್ಞಾನವು ಅಖಂಡವಾದದ್ದು. ಆದ ಪ್ರಯುಕ್ತ ಸಖಂಡವಾದ ನಿತ್ಯತ್ವವು, ಅಖಂಡವಾದ ಬ್ರಹ್ಮನ ಸ್ವರೂಪವೆಂಬು ವದು ಕೂಡುವದಿಲ್ಲ. "ನಕೇವಲತ್ವಂ" (ದಶಶ್ಲೋಕೀ) ಎಂಬ ಶ್ಲೋಕದಿಂದ ಏಕತ್ವವು ಅವಿದ್ಯಾಕಲ್ಪಿತವಾದದ್ದರಿಂದ ಬ್ರಹ್ಮನಲ್ಲಿ ಇಲ್ಲಾ ಎಂದು ಶಂಕರಾ ಚಾರ್ಯರೇ ಹೇಳಿರೋಣದರಿಂದ ಏಕತ್ವವೂ ಅದ್ವೈತಿಗಳ ಜ್ಞಾನ (ಬ್ರಹ್ಮದಲ್ಲಿ) ಇಲ್ಲ ಸತ್ಯವಾದ ಜ್ಞಾನಸ್ವರೂಪವೂ ಆಗುವದಿಲ್ಲ. ಬೌದ್ಧರ ವಿಜ್ಞಾನವು ಅಖಂಡ ವೂ, ನಿರ್ವಿಶೇಷವೂ (ಸಕಲಧರ್ಮರಹಿತವೂ) ಆದುದರಿಂದ ಬೌದ್ಧರ ವಿಜ್ಞಾನ ದಲ್ಲಿ ಅನೇಕತ್ವವೂ ಇಲ್ಲ, ಕ್ಷಣಿಕತ್ವವೂ ಇಲ್ಲ, ಕ್ಷಣಿಕತ್ವಾದಿಗಳು ಸಖಂಡವಾದ ಪ್ರಯುಕ್ತ ಅಖಂಡವಾದ ಬೌದ್ಧರ ಜ್ಞಾನಸ್ವರೂಪವೂ ಆಗುವದಿಲ್ಲಾದಕಾರಣ "ಕಿಂಚ ಆಲಯವಿಜ್ಞಾನಂ ಸ್ಥಾಯಿಚೇತ್ ನಾಮಾಂತರೇಣ ಅಸ್ಮದಾತ್ಮೈವ ಸ್ಯಾತ್" ಎಂಬ ಸಂಕ್ಷೇಪ ಶಾರೀರಕ (೨।೬೮) ಶ್ಲೋಕ ವ್ಯಾಖ್ಯಾನದಲ್ಲಿ ಬೌದ್ಧರ ಆಲಯ ವಿಜ್ಞಾನವು ಸ್ಥಾಯಿ (ನಿತ್ಯವು) ಆದರೆ ಅದು ನಮ್ಮ ಬ್ರಹ್ಮವೇ ಎಂದು ಮಧುಸೂದನ ಸರಸ್ವತಿಗಳು ಹೇಳಿರುವದರಿಂದ, ಆಲಯವಿಜ್ಞಾನಂ "ಸಮಸ್ತವಾಸನಾಧಾರ ಮಭ್ಯುಪಗಚ್ಛನ್" ಅಕ್ಷರಂ (ಅವಿನಾಶನಂ) ಆತ್ಮಾನ ಮಭ್ಯುಪೈತಿ" ಎಂದು ೨।೨।೩೨ ನೇ ಬ್ರಹ್ಮಸೂತ್ರ ವ್ಯಾಖ್ಯಾನದಲ್ಲಿ, ಆಲಯ ವಿಜ್ಞಾನವು ನಿತ್ಯವಾದದ್ದೆಂದು ಬೌದ್ಧರು ಒಪ್ಪಿಕೊಳ್ಳುತ್ತಾರೆಂದು ಭಾಮತಿಕಾರರು ಹೇಳಿರೋಣದಿಂದಲೂ ಬೌದ್ಧರ ವಿಜ್ಞಾನವು ಅದ್ವೈತರ ಬ್ರಹ್ಮದಂತೆ ನಿತ್ಯವೆಂದು ಸಿದ್ಧಿಸೋಣದರಿಂದ, ಅದ್ವೈತರಜ್ಞಾನಕ್ಕೂ ಬೌದ್ಧರ ಜ್ಞಾನಕ್ಕೂ ನಿತ್ಯತ್ವ, ಕ್ಷಣಿಕತ್ವ, ಏಕತ್ವ, ಅನೇಕತ್ವ ವಿಷಯಗಳಲ್ಲಿ ವಿಶೇಷವಿಲ್ಲ.

ಶಬ್ದಗಳು ಒಂದು ವಸ್ತುವನ್ನು ಬೋಧನಮಾಡಬೇಕಾದರೆ ಆ ವಸ್ತುವಿ ನಲ್ಲಿ ದ್ರವ್ಯವೋ, ಗುಣವೋ, ಕರ್ಮವೋ, ಜಾತಿಯೋ, ಭೇದವೋ, ಸಂಬಂ ಧವೋ, ಯಾವದೋ ಒಂದು ಧರ್ಮವಿರಬೇಕು. ಅದ್ವೈತರ ಜ್ಞಾನ (ಬ್ರಹ್ಮ) ದಲ್ಲಿ ಇದರಪೈಕಿ ಯಾವ ಧರ್ಮವೂ ಇಲ್ಲದೆ ಇರೋಣದರಿಂದ, ಅದ್ವೈತರ ಜ್ಞಾನವು (ಬ್ರಹ್ಮವು) ಯಾವ ಶಬ್ದದಿಂದಲೂ ಬೋಧ್ಯನಲ್ಲಾದಕಾರಣ ಉಪ ನಿಷದೇಕಗಮ್ಯತ್ವವು ಅದ್ವೈತರ ಜ್ಞಾನದಲ್ಲಿ ಬರಲು ಶಕ್ಯವಿಲ್ಲಾ. ಆದುದರಿಂದ ಬೌದ್ಧರ ವಿಜ್ಞಾನಕ್ಕೂ, ಅದ್ವೈತರಜ್ಞಾನಕ್ಕೂ ಉಪನಿಷದೇಕವೇದ್ಯತ್ವ ವಿಷ ಯದಲ್ಲಿಯೂ ಭೇದವು ಬರುವಂತೆ ಇಲ್ಲವೆಂದು ಸಿದ್ಧವಾಯಿತು. ಜಗತ್ತು ಕಲ್ಪಿತ ಎಂಬುವದು ಇಬ್ಬರೂ ಒಪ್ಪುತ್ತಾರಾದಕಾರಣ, ಅದ್ವೈತಮತವು

ವಿಜ್ಞಾನವಾದಿಗಳಾದ ಬೌದ್ಧಮತವು ಒಂದೇ ಆದದ್ದು ಎಂದು ಕೋರ್ಟಿನಿಂದ ತೀರ್ಮಾನ (ನಿರ್ಣಯ) ಮಾಡಲ್ಪಟ್ಟಿದೆ.

---

## ಡಿಕ್ರಿ.

(೧) ಅವೈದಿಕವಾದ ಅದ್ವೈತಮತವನ್ನು ಪ್ರತಿವಾದಿಗಳು ವೈದಿಕವಾದದ್ದು ಎಂದು ಉಪದೇಶ ಮಾಡಬಾರದು.

೨. ಸಾತ್ವಿಕಜನರು ಆ ಅದ್ವೈತಿಗಳ ಉಪದೇಶವನ್ನು ಕೇಳಿ ಅದ್ವೈತಮತದಪ್ರಕಾರ ಅಹಂಬ್ರಹ್ಮ ಎಂದು ಉಪಾಸನಾ ಮಾಡಬಾರದು.

೩. ಹಾಗೆ ಅದ್ವೈತಿಗಳು ಉಪದೇಶಮಾಡಿದರೆ ಸಾತ್ವಿಕಜನರು ಆ ಉಪದೇಶವನ್ನುಕೇಳಿ ಆ ಅದ್ವೈತ ಮತದಪ್ರಕಾರ ಉಪಾಸನಾಮಾಡಿದರೆ "ಮಾಮಪ್ರಾಪ್ಯೈವಕೌಂತೇಯ ತತೋಯಾಂತ್ಯಧಮಾಂಗತಿಂ" ಎಂದು ಗೀತೆಯಲ್ಲಿ ಹೇಳಿದ ಶಿಕ್ಷಾಕ್ಕೆ ಪಾತ್ರರಾಗುವರು. ಆದ್ದರಿಂದ "ಯದಾಪಶ್ಯಃ ಪಶ್ಯತೆ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ ತದಾವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ" "ಯೋಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಂ ...... ಇತಿ ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಕೃತಕೃತ್ಯಶ್ಚ ಭಾರತ" "ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್" ಇವೇ ಮೊದಲಾದ ಶ್ರುತಿ, ಗೀತಾ, ಸೂತ್ರಗಳಲ್ಲಿ ಹೇಳಿದ ಪ್ರಕಾರ ಪರಮಾತ್ಮನು ಸರ್ವೋತ್ತಮನು, ಜಗತ್ ಜನ್ಮಾದಿಕರ್ತೃನು, ಹಿರಣ್ಯಗರ್ಭ, ರುದ್ರ ಮೊದಲಾದ ಸಮಸ್ತ ಪ್ರಾಣಿಗಳಿಗೆ ಜನಕನು ಎಂದು ತಿಳಿದು ಆಪ್ರಕಾರ ಉಪಾಸನಾಮಾಡಿ ಬ್ರಹ್ಮಾಪರೋಕ್ಷ ಜ್ಞಾನವನ್ನು ಸಂಪಾದನಮಾಡಿಕೊಂಡು ಸವಿಷ ಸಂಪ್ರಸಾದೋಽಸ್ಮಾಚ್ಛರೀರಾತ್ ...... ಪರಂಜ್ಯೋತಿ ರುಪಸಂಪದ್ಯ ಸ್ವೇನರೂಪೇಣಾಭಿ ನಿಷಲುದ್ಯತೆ ಸತತ್ರಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ ಕಾಮಾನ್ನೀಕಾಮರೂಪ್ಯನುಸಂಚರನ್" ಇವೇ ಮೊದಲಾದ ಶ್ರುತಿಗಳಲ್ಲಿ ಹೇಳಿದಪ್ರಕಾರ ಪರಮಾತ್ಮನನ್ನು ಹೊಂದಿ ಬಂಧದಿಂದಾ ಮುಕ್ತನಾಗಿ ವೈಕುಂಠಾದಿ ಸ್ಥಾನಗಳಲ್ಲಿ ಅಭೀಷ್ಟವಾದ ಫಲಗಳನ್ನು ಅನುಭವಮಾಡುತ್ತಾ ಸಾಮಗಾನದಿಂದ ಪರಮಾತ್ಮನ ಸ್ತೋತ್ರಮಾಡುತ್ತ ಸುಖಿಯಾಗಿ ಇರತಕ್ಕದ್ದು ಎಂದು ಜನಗಳ ಸುಖಾರ್ಥವಾಗಿ ಡಿಕ್ರಿ ಮಾಡಲ್ಪಟ್ಟಿದೆ.

ಸಂಯಮನೀಪುರ.
೧೦-೩-೧೯೨೯.

Dharma Raj H. B.
*Chief judge. High Court.*

॥ಶ್ರೀ॥

# ಸಂಯಮನೀಪುರದಹೈಕೋರ್ಟ್

O. S. No. 564 of 1927.

A. ಅದ್ವೈತಮತವು ಬೌದ್ಧಮತದಿಂದ ಬೇರೆಆದದ್ದೆ, ಅಥವಾಒಂದೇನೆ?

B. ಅದ್ವೈತಮತವು ವೈದಿಕವೊ (ವೇದದಿಂದ ಸಿದ್ಧವಾದದ್ದೊ) ಅಥವಾ ಅವೈದಿಕವೊ (ವೇದದಿಂದ ಸಿದ್ಧವಾಗದೇ ಇರುವದೋ, ಅಥವಾ ವೇದಕ್ಕೆ ವಿರುದ್ಧವಾದದ್ದೊ ಎಂಬ)

ಐದನೇ ಇಷ್ಯೂವಿನ (ಮುದ್ದೆದ) ವಿಚಾರವು.

ವಾದೀ ವಿಚಾರವು.

ಕೋರ್ಟ್. ನಿಮ್ಮ ಹೆಸರೇನು ?

ವಾದಿ. ವಿಷ್ಣುದಾಸಾಚಾರ್ಯ.

ಕೋರ್ಟ್. ದೇವರಶಪಥಮಾಡಿ ಕೋರ್ಟಿನಮುಂದೆ ಸಮಸ್ತವೂ ಸತ್ಯಹೇಳುತ್ತೆನೆಂದು ಹೇಳಿ.

ವಾದಿ. ದೇವರಶಪಥಪೂರ್ವಕವಾಗಿ ಕೋರ್ಟಿನಮುಂದೆ ಸಮಸ್ತವೂ ಸತ್ಯ ಹೇಳುತ್ತೇನೆ.

ಕೋ. ನಿಮ್ಮ ಅಂಬೋಣವೇನದೆ ?

ವಾದಿ. ಅದ್ವೈತಮತವೂ ಬೌದ್ಧಮತವೂ ಒಂದೇ ಆದುದ್ದರಿಂದ ಬೌದ್ಧ ಮತದಂತೆ ಅದ್ವೈತಮತವು ಅವೈದಿಕವು. (ವೇದವಿರುದ್ಧವುಮತ್ತು ವೇದದಿಂದಸಿದ್ಧಿಸದೇ ಇರುವುದು). ಅನರ್ಥಕ್ಕೆ ಕಾರಣವಾದದ್ದು. ಆದ್ದರಿಂದ ಮೋಕ್ಷ ಮೊದಲಾದ ಫಲಗಳನ್ನಪೇಕ್ಷಿಸುವ, ವೈದಿಕ ರಾದ, ಆಸ್ತಿಕ ಜನಗಳಿಂದ ಸ್ವೀಕರಿಸುವುದಕ್ಕೆ ಯೋಗ್ಯವಾದದ್ದು ಅಲ್ಲ. ಆದ್ದರಿಂದ, ಆ ಅವೈದಿಕವಾದ ಅದ್ವೈತಮತವನ್ನು ತ್ಯಾಗ ಮಾಡಿ, ವೈದಿಕವಾದ ದ್ವೈತಮತವನ್ನೇ, ಮೋಕ್ಷಮೊದಲಾದ ಫಲ ಗಳನ್ನಪೇಕ್ಷಿಸುವವರು ಆಶ್ರಯಿಸಬೇಕು ಎಂತ ನಮ್ಮನಿರೂಪಣ ಅದೇ.

## ಪ್ರತಿವಾದಿ ವಿಚಾರವು.

ಕೋ. ನಿಮ್ಮ ಹೆಸರೇನು?

ಪ್ರ. ಗಂಗಾಧರಶಾಸ್ತ್ರಿ.

ಕೋ. ದೇವರ ಶಪಥಮಾಡಿ ಕೋರ್ಟಿನ ಮುಂದೆ ಸರ್ವವೂ ಸತ್ಯವಾಗಿ (ಖರೇ) ಹೇಳುತ್ತೆನೆಂದು ಹೇಳಿರಿ'

ಪ್ರ. ನಂಮ ಮತದಪ್ರಕಾರ ಬ್ರಹ್ಮಾತಿರಿಕ್ತವಾದ ಪಾರಮಾರ್ಥಿಕಸತ್ಯವಾದ ಪದಾರ್ಥಗಳೇ ಇಲ್ಲ. ಸರ್ವವೂ ವ್ಯಾವಹಾರಿಕ ಸತ್ಯವಾದ್ದರಿಂದ ಪಾರಮಾರ್ಥಿಕ ಸತ್ಯ ಹೇಳುತ್ತೇನೆಂತ ಹೇಳಲು ಅಶಕ್ಯವು. ಆದ್ದರಿಂದ ದೇವರ ಶಪಥಮಾಡಿ ವ್ಯಾವಹಾರಿಕ ಸತ್ಯವಾಗಿ ಹೇಳುತ್ತೇನೆ.

ಕೋ. ನೀವು ಆಸ್ತಿಕರೋ ನಾಸ್ತಿಕರೋ?

ಪ್ರ. ನಂಮ ಅದ್ವೈತಮತವು ಬೌದ್ಧಮತವಲ್ಲ. ನಂಮ ಅದ್ವೈತ ಮತವೇ ಬೇರೆ, ಬೌದ್ಧಮತವೇ ಬೇರೆ. ಅದ್ವೈತಮತವು ವೈದಿಕವು. ಬೌದ್ಧಮತವು ಅವೈದಿಕವು. ಅದ್ವೈತಮತದ ಪ್ರಕಾರ ಆಚರಣ ಮಾಡುವವರಿಗೆ ಪರಮಪುರುಷಾರ್ಥದ ಲಾಭವಾಗುವುದು.

ಕೋ. ದ್ವೈತಮತದಪ್ರಕಾರ ಆಚರಣಮಾಡುವವರಿಗೂ ಫಲವು ಉಂಟೋ ಇಲ್ಲವೋ?

ಪ್ರ. ದ್ವೈತಮತದಪ್ರಕಾರ ಆಚರಣ ಮಾಡುವವರಿಗೆ ಫಲಗಳುಂಟು. ನಾವೂನೂ ದ್ವೈತ ಮತದಪ್ರಕಾರ ಬ್ರಾಹ್ಮಣಾದಿವರ್ಣಗಳಿಗೆ, ಬ್ರಹ್ಮಚರ್ಯಾಧ್ಯಾಶ್ರಮಗಳಿಗೆ, ವೇದಗಳಿಂದ ವಿಹಿತವಾದ ಸ್ನಾನ, ಸಂಧ್ಯಾ, ಯಜ್ಞ, ಗಂಗಾದಿತೀರ್ಥಸ್ನಾನ, ವೇದಾಧ್ಯಯನ, ಶ್ರವಣ, ಮನನ, ಧ್ಯಾನ, ಮುಂತಾದವುಗಳನ್ನು ಮಾಡುತ್ತೇವೇ. ಅದರೆ ಅದ್ವೈತ ಮತದಪ್ರಕಾರ ಆಚರಣೆಮಾಡಿ, ಸಗುಣಬ್ರಹ್ಮಜ್ಞಾನ ಸಂಪಾದನ ಮಾಡಿದರೆ, ವೈಕುಂಠಾದಿ ಲೋಕಪ್ರಾಪ್ತಿ ಯಾಗುತ್ತದೆ. ನಿರ್ಗುಣಬ್ರಹ್ಮಭಾವರೂಪ ಮೋಕ್ಷಪ್ರಾಪ್ತಿ ಯಾಗುವದಿಲ್ಲ. ಅದು ನಂಮ ಮತದಪ್ರಕಾರ "ಅಹಂ ಬ್ರಹ್ಮಾಸ್ಮಿ" ಎಂದು ಧ್ಯಾನಮಾಡಿ ಬ್ರಹ್ಮಾಪರೋಕ್ಷಹೊಂದಿದರೆ, ನಿರ್ಗುಣ ಬ್ರಹ್ಮಭಾವರೂಪ ಮೋಕ್ಷ ಪ್ರಾಪ್ತಿ ಯಾಗುತದೆ. ದ್ವೈತಮತವು ಆ ಪ್ರಕಾರ ಆಚರಣೆಯು, ಮತ್ತು ಫಲವು ಕೆಳಗಿನ ಮೆಟ್ಟಲು (Lower Stage) ನಂಮ

ಅದ್ವೈತಮತವು ಆಪ್ರಕಾರ ಆಚರಣೆಯು ಮತ್ತು ನಿರ್ಗುಣಬ್ರಹ್ಮ ವಾಗುವುದು ಮೇಲಿನ ಮೆಟ್ಟಲು (Higher Stage) ಆದುದರಿಂದ ದ್ವೈತ ಮತದಪ್ರಕಾರ ಆಚರಣೆಮಾಡಿದಾಗ್ಯಾ, ಅದರಿಂದ ಫಲ ಬಂದರೂ, ಅದು ಉತ್ತಮಫಲವಲ್ಲ. ನಮ್ಮ ಅದ್ವೈತ ಮತವೇ ಉತ್ತಮವಾದದ್ದು. ಅದ್ವೈತಮತದಪ್ರಕಾರ ಆಚರಣೆ ಮಾಡಿದರೇನೇ ಉತ್ತಮಫಲ ದೊರೆಯುವುದು.

ಪ್ರ. ಮೈಲಾರ್ಡ್ (ಧರ್ಮರಾಜ ಮಹಾರಾಜರೇ) ಈ ವಿಚಾರದಲ್ಲಿ ಪ್ರತಿವಾದಿಗಳು ವಾದಿಯಮೇಲೆ ತಾವೇ ಕ್ರಾಸ್ ನಡೆಸುವುದಕ್ಕೆ ಅಪೇಕ್ಷಿಸುತ್ತಾರೆ. ಕೋರ್ಟಿನವರು ಅಪ್ಪಣೆ ಕೊಡಬೇಕು.

ಕೋ. ಮಿಸ್ಟರ್ ಮಾಧವದಾಸರೇ ಮಿಸ್ಟರ್ ಹರಿಹರಶರ್ಮ ಏನು ಹೇಳುತ್ತಾರೆ? ನಿಮ್ಮ ಅಭಿಪ್ರಾಯವೇನು?

ವಾ. ವ. (ಮಾಧವದಾಸ) ನಂಮ ಕಕ್ಷಿಗಾರನಾದ ವಾದೀಗೂನೂ ಪ್ರತಿವಾದಿಯಮೇಲೇ ಕ್ರಾಸ್ ಮಾಡುವುದಕ್ಕೆ ಅಪ್ಪಣೆ ಆದರೆ ವಾದಿ ಪ್ರತಿವಾದಿಗಳು ಪರಸ್ಪರ ಕ್ರಾಸ್‌ಮಾಡಿ ತಂಮ ತಂಮ ಅಭಿಪ್ರಾಯಗಳನ್ನು ಆಧಾರ ಸಹಿತವಾಗಿ ಕೋರ್ಟಿನವರ ಸಮಕ್ಷಮಕ್ಕೆ ತಿಂದುಕೊಡಲು ನಂಮ ಅಡ್ಡಿ ಏನೂ ಇರುವದಿಲ್ಲ.

ಕೋ. "ಎಸ್" ಮಿಸ್ಟರ್ ಹರಿಹರಶರ್ಮರೇ! ಮಿಸ್ಟರ್ ಮಾಧವದಾಸರು ಹೇಳಿದ ಪ್ರಕಾರ ಮಧ್ಯೆ ಬೇಕಾದ ವಿಷಯಗಳಲ್ಲಿ ನೀವೂ ಮಾಧವದಾಸರೂ ಕ್ರಾಸ್ ಮಾಡಿರಿ. ಮಧ್ಯೆ ಬೇಕಾದ ಕ್ರಾಸನ್ನು ಕೋರ್ಟ್ ಮಾಡುತ್ತದೆ. ವಾದಿ ಪ್ರತಿವಾದಿಗಳು ತಂಮ ತಂಮ ಪಕ್ಷಗಳ ಆಧಾರಗಳನ್ನು ಪರಪಕ್ಷದ ದೂಷಣಗಳನ್ನು ಕೋರ್ಟಿನಮುಂದೆ ಇಡಲಿ.

ವಾ. ವಕೀಲ. ಪ್ರತಿವಾದಿವಕೀಲ ಎಸ್ ಎಸ್.

ಪ್ರ. ನಂಮ ಶಂಕರಾಚಾರ್ಯರು ಅವೈದಿಕವಾದ ಬೌದ್ಧಮತದ ಖಂಡನವನ್ನುಮಾಡಿ ವೈದಿಕಮತವನ್ನು ಸ್ಥಾಪಿಸಿರಲಿಕ್ಕೆ, ಶಂಕರಾಚಾರ್ಯರ ಅದ್ವೈತಮತವು ಬೌದ್ಧಮತವೆಂತ ಹೇಳುವುದು ಹೇಗೆ ಯುಕ್ತವಾಗುತ್ತದೆ?

ವಾ. ಶಾಸ್ತ್ರಿಗಳೇ ಈ ಗ್ರಂಥವನ್ನು ನೋಡಿದ್ದೀರಾ?

ಪ್ರ. ನೋಡಿರುತ್ತೇನೆ.

ವಾದಿ. ಇದು ಯಾವಗ್ರಂಥವು ?

ಪ್ರ. ಗಂ. ನಂಮ ಶಂಕರಾಚಾರ್ಯರು ರಚಿಸಿದ "ಸರ್ವಸಿದ್ಧಾಂತಸಂಗ್ರಹ" ಎಂಬ ಗ್ರಂಥವು.

ವಾದಿ. ‡ ಈ ಶ್ಲೋಕವನ್ನು ಓದಿ ಅರ್ಥವನ್ನು ಹೇಳಿರಿ?

ಪ್ರ. ಪೂರ್ವದಲ್ಲಿ ಬೌದ್ಧರೇ ಮೊದಲಾದ ನಾಸ್ತಿಕರಿಂದ ನಾಶಮಾಡಲ್ಪಟ್ಟ ವೇದಮಾರ್ಗವನ್ನು ಕುಮಾರನ ಅಂಶರಾದ ಭಟ್ಟಾಚಾರ್ಯರು ಭೂತಲದಲ್ಲಿ ಸ್ಥಾಪಿಸಿದರು. ವೇದಬಾಹ್ಯರಾದ ಜನರನ್ನು ನಿರಾಕರಣಮಾಡಿ ಭಟ್ಟಾಚಾರ್ಯರಿಂದ ಅನುಸರಿಸಲ್ಪಟ್ಟ ಮಾರ್ಗದಲ್ಲಿ (ಜನರು ನಡೆದರು) ಎಂತ ಅರ್ಥವು.

ವಾದಿ. ಈಶ್ಲೋಕಗಳಿಂದ ಬೌದ್ಧ ಮುಂತಾದವರ ಮತವನ್ನು ಯಾರು ನಾಶ ಮಾಡಿ, ವೈದಿಕಮತವನ್ನು ಸ್ಥಾಪಿಸಿದರು, ಎಂದು ಶಂಕರಾಚಾರ್ಯರು ಹೇಳಿದ್ದಾರೆ?

ಪ್ರ. ಕುಮಾರಿಲಭಟ್ಟರೇ ಬೌದ್ಧಮತವನ್ನು ಖಂಡನಮಾಡಿ ವೈದಿಕ ಮತವನ್ನು ಸ್ಥಾಪಿಸಿದರು ಎಂದು ಶಂಕರಾಚಾರ್ಯರು ಹೇಳಿರುವರು

ವಾದಿ. ಈಪುಸ್ತಕವು ಯಾವದು?

ಪ್ರ. ಆನಂದಗಿರಿಯವರಿಂದ ರಚಿಸಿತವಾದ ಶಂಕರ ವಿಜಯವು.

ವಾದಿ. • ಈ ವಾಕ್ಯಗಳ ಅಭಿಪ್ರಾಯಗಳನ್ನು ಹೇಳಿರಿ.

ಪ್ರ. ದಿ. ಭಟ್ಟಾಚಾರ್ಯರೆಂಬ ಒಬ್ಬ ಬ್ರಾಹ್ಮಣಶ್ರೇಷ್ಠನು ಉತ್ತರದೇಶದಿಂದ ಬಂದು ದುಷ್ಟಮತವನ್ನು ಆಶ್ರಯಿಸಿದ ಅಸಂಖ್ಯಾಕರಾದ ಬೌದ್ಧರಂನ್ನು ರಾಜದ್ವಾರ ಅನೇಕವಿಧ ಶಾಸ್ತ್ರಾರ್ಥ ವಿಚಾರಗಳಿಂದಗೆದ್ದು ಆ ಬೌದ್ಧರ, ಶಿರಸ್ಸುಗಳನ್ನು ಕೂಡಲಿಗಳಿಂದ ಕಡಿಸಿ, ಗಾಣಗಳಿಗೆ ಹಾಕಿಚೂರ್ಣಮಾಡಿಸಿ ಇದೇಪ್ರಕಾರೆ·ದುಷ್ಟಮತಗಳನ್ನು ನಾಶಮಾಡಿ ನಿರ್ಭಯವಾಗಿದ್ದಾನೆ

---

‡ಬೌದ್ಧಾದಿ ನಾಸ್ತಿಕಧ್ವಸ್ತವೇದಮಾರ್ಗಂಪುರಾಕಿಲ॥ ಭಟ್ಟಾಚಾರ್ಯಃ ಕುಮಾರಾಂಶಃ ಸ್ಥಾಪಯಾಮಾಸಭೂತಲೇ॥ ವೇದಬಾಹ್ಯಾ ನ್ನಿರಾಕೃತ್ಯ ಭಟ್ಟಾಚಾರ್ಯೈರ್ಗತೇಪಥಿ ॥ ಶಂ. ಸರ್ವಸಿ.

• ಭಟ್ಟಾಚಾರ್ಯಾರನ್ಯೋದ್ವಿಜವರಃ ಕಶ್ಚಿದುದಗ್ದೇಶಾದಾಗತ್ಯದುಷ್ಟಮತಾವಲಂಬಿನೋ ಬೌದ್ಧಾನ್ ಜೈನಾನ ಸಂಖ್ಯಾನ್ ರಾಜಮುಖಾದನೇಕ ವಿದ್ಯಾಪ್ರಸಂಗಭೇದೈಃ ನಿರ್ಜಿತ್ಯತೇಷಾಂಶೀರ್ಷಾಣಿ ಪರಶುಭಿಶ್ಛಿತ್ವಾ ಬಹುಷು ಉಲೂಖಲೇಷು ನಿಕ್ಷಿಪ್ಯಕಟಭ್ರಮಣೈ ಚೂರ್ಣೀಕೃತ್ಯ ಚೈವಂ ದುಷ್ಟಮತಧ್ವಂಸನಮಾಚರನ್ ನಿಭಯೋವರ್ತತೆ.

ಎಂಬ ಅದ್ಭುತಕಾರ್ಯವನ್ನು ಕೇಳಿ, ಶಿಷ್ಯರಿಂದಸಹಿತರಾಗಿ ಶಂಕರಾಚಾರ್ಯರು ಜಯಶಬ್ದದಿಂದ ಯುಕ್ತವಾದ ರುದ್ಧ ವೆಂಬ ನಗರವನ್ನು ಕುರಿತು ಬಂದರು. ಆಕಾಲಕ್ಕೆ ಕುಮಾರಿಲ ಭಟ್ಟಾಚಾರ್ಯರು ಬಂದ ಶಂಕರಾಚಾರ್ಯರನ್ನು ಉದ್ದೇಶಿಸಿ ಹೇಳುತ್ತಾರೆ. ನೂತನನಾದ ಬೌದ್ಧತರನೇ (ಹೊಸದಾಗಿ ಬೌದ್ಧಮತ ಸ್ಥಾಪನೆಯನ್ನು ಅತಿಶಯವಾಗಿಮಾಡುವವನೆ) ನಾನು ಜಾಗ್ರತನಾಗಿರುವಕಾಲಕ್ಕೆ ಬರಲಿಲ್ಲ. ಈಗ ಪೊಳಕಾಲಪರ್ಯಂತ ಸುಟ್ಟುಹೋಗಿದ್ದೇನೆ. ಈ ಸ್ಥಿತಿಯಲ್ಲಿ ನಿನ್ನ ಸಂಗಡ ಏನುವಾದಮಾಡಲಿ ಎಂದು ಹೇಳಿದರು ಎಂಬಭಿಪ್ರಾಯವು.

ವಾ. ಈ ಶಂಕರ ವಿಜಯ ಗ್ರಂಥದಿಂದ ಬೌದ್ಧಮತವನ್ನು ಯಾರು ಖಂಡನೆ ಮಾಡಿದರು ಎಂದು ಸಿದ್ಧಿಸುತ್ತದೆ?

ಪ್ರ. ವಾ. ಕುಮಾರಿಲಭಟ್ಟರೇ ಖಂಡನ ಮಾಡಿದರೆಂದುಸಿದ್ಧಿಸುತ್ತದೆ.

ವಾ. ಈ ಗ್ರಂಥವನ್ನು ನೋಡಿದ್ದೀರಾ, ಯಾರುಮಾಡಿದ್ದು?

ಪ್ರ. ವಾ. ಈ ಗ್ರಂಥವನ್ನು ನೋಡಿದ್ದೇನೆ ಇದು ವಿದ್ಯಾರಣ್ಯರು ಮಾಡಿದ "ಶಂಕರ ವಿಜಯವು"

ವಾ. ಈ ಶಂಕರ ವಿಜಯದಲ್ಲಿರುವ * ಈ ಶ್ಲೋಕಗಳ ಅರ್ಥವನ್ನು ಹೇಳಿರಿ?

ಪ್ರ. ವಾ. ಕುಮಾರಿಲಭಟ್ಟರು ಬೌದ್ಧಪಂಡಿತರ ಸಂಗಡ ವಾದಮಾಡಿ ಬೌದ್ಧರನ್ನಾ ಜಯಿಸಿ, ತರುವಾಯ ಸುಧನ್ವರಾಜನಿಂದ ವೇದದ್ವೇಷಮಾಡಕಕ್ಕೆ ಆಸೇತು ಹಿಮಾಚಲಪರ್ಯಂತ ಇದ್ದ, ಆಬಾಲವೃದ್ಧ ಯಾವತ್ತೂ ಬೌದ್ಧರನ್ನು ಸಂಹಾರ ಮಾಡಬೇಕು, ಯಾವ ಭೃತ್ಯನು ಬೌದ್ಧರನ್ನು ಸಂಹಾರ ಮಾಡುವದಿಲ್ಲವೋ, ಆಭೃತ್ಯನನ್ನಾಸಹ ಸಂಹಾರಮಾಡಬೇಕೆಂಬ,

---

* ಉಪನ್ಯಸತ್ಸುಸಾಕ್ಷೇಪಂ ಖಂಡಯತ್ಸುಪರಸ್ಪರಂ। ತೇಷೂದತಿಷ್ಠನ್ನಿ ರ್ಘೋಷೋಭಿಂದನ್ನಿವರಸಾತಲಂ। ಅಧಃಪೇತುರ್ಬುಧೇಂದ್ರೇಣ ಕ್ಷತಾಃಪಕ್ಷೇಷು ತತ್ಕ್ಷಣಂ। ವ್ಯಾಡಕರ್ಕಶತರ್ಕೇಣ ತಥಾಗತಧರಾಧರಾಃ। ನಿರಸ್ತಾ ಖಿಲಸಂದೇಹೊ ವಿನ್ಯಸ್ತೇತರದರ್ಶನಾತ್ ॥ ವ್ಯಧಾದಾಜ್ಞಾಂ ತತೋರಾಜಾ ವಧಾಯ ಶ್ರುತಿವಿದ್ವಿಷಾಂ। ಆಸೇತೋರಾತುಷಾರಾದ್ರೆ ಬೌದ್ಧಾನಾ ವೃದ್ಧಬಾಲಕಂ। ನಹಂತಿಯಃ ಸಹಂತವ್ಯೊ ಭೃತ್ಯಾನಿತ್ಯನ್ವಶಾನ್ನೃಪಃ। ಕುಮಾರಿಲ ಮೃಗೇಂದ್ರೇಣ ಹತೇಷು ಜಿನಹಸ್ತಿಷು। ನಿಷ್ಪ್ರತ್ಯೂಹ ಮವರ್ಧಂತ ಶ್ರುತಿಶಾಖಾಃ ಸಮಂತತಃ।

(ವಿದ್ಯಾರಣ್ಯ ಶಂಕರವಿಜಯ)

(ಮಿಲಿಟರಿ) ಕಾಯಿದೆಯನ್ನು ಮಾಡಿಸಿ ಬೌದ್ಧರನ್ನು ಸಂಹರಿಸಿದನಂತರ ಕುಮಾರಿಲ ಭಟ್ಟನೆಂಬ ಸಿಂಹದಿಂದ ಬೌದ್ಧರೆಂಬ ಗಜಗಳು ಹತವಾಗುತ್ತಿರಲಿಕ್ಕೆ ಶ್ರುತಿಶಾಖೆಗಳು (ಸಮಸ್ತವೇದಗಳು) ವಿಘ್ನವಿಲ್ಲದೆ ಸಮಸ್ತ ದೇಶಗಳಲ್ಲಿ ಅಭಿವೃದ್ಧಿಯಾದವು. (ವೇದೋಕ್ತಪ್ರಕಾರವಾಗಿ ಸರ್ವಜನರೂ ದೇಶದಲ್ಲಿ ನಡೆಯಲಿಕ್ಕೆ ಆರಂಭಿಸಿದರು) ಎಂದು ಅಭಿಪ್ರಾಯವು.

ವಾ. ವಿದ್ಯಾರಣ್ಯರು ಮಾಡಿದ ಶಂಕರ ವಿಜಯದಿಂದ, ಬೌದ್ಧಮತವನ್ನ ಯಾರು ಖಂಡನಮಾಡಿದರೆಂದು ಸಿದ್ಧಿಸಿತು?

ಪ್ರ. ಕುಮಾರಿಲಭಟ್ಟರು ಖಂಡನ ಮಾಡಿದರೆಂದು ಸಿದ್ಧಿಸುತ್ತದೆ. ಆದರೆ ಕುಮಾರಿಲಭಟ್ಟರು ಬೌದ್ಧಮತ ಖಂಡನಮಾಡಿದನಂತರ ಮತ್ತು ಅಭಿವೃದ್ಧಿಗೆಬರಲು ಶಂಕರಾಚಾರ್ಯರು ಆಕಾಲದಲ್ಲಿ ಬೌದ್ಧಮತವನ್ನ ಪುನಃ ಖಂಡನಮಾಡಿದರೆಂದು ಹೇಳ ಬಹುದಾದಕಾರಣ ಶಂಕರಾಚಾರ್ಯರು, ಬೌದ್ಧಮತವನ್ನ ಖಂಡನಮಾಡಲಿಲ್ಲೆಂದು ಹೇಗೆ ನೀವು ಹೇಳುತ್ತಿರಿ?

ವಾ. ಕುಮಾರಿಲಭಟ್ಟರು ದುಷ್ಟವಾದ ಬೌದ್ಧಮತದ ವಿಧ್ವಂಸನಮಾಡಿ ಆಬಾಲವೃದ್ಧ ಸರ್ವಬೌದ್ಧರನ್ನಾ ಸಂಹರಿಸಿ ವೇದಮಾರ್ಗವನ್ನು ಭರತ ಖಂಡದಲ್ಲಿ ಸ್ಥಾಪನೆಮಾಡಿ ನಿರ್ಭಯನಾಗಿರುವಕಾಲಕ್ಕೆ ಶಂಕರಾಚಾರ್ಯರು ಶಿಷ್ಯಸಮೇತರಾಗಿ ಕುಮಾರಿಲಭಟ್ಟರನ್ನು ನೋಡುವುದಕ್ಕೆ ಹೋದರು ಎಂದು ಹೇಳಿರುವುದರಿಂದ ಶಂಕರಾಚಾರ್ಯರು ಆ ಕಾಲಕ್ಕೆ ಪ್ರೌಢಾವಸ್ಥೆಯವರೇ ಆಗಿರಬೇಕು ಮತ್ತು ಅವರ ಆಯುಷ್ಯವೂ ಕೂಡ ಮೂವತ್ತೆರಡುವರುಷವು. ಹೀಗಿರುವಾಗ ಮಧ್ಯೆ ಸ್ವಲ್ಪಕಾಲದಲ್ಲಿ ಬೌದ್ಧಮತದ ಅಂಕುರವೇ ಹುಟ್ಟಲಿಕ್ಕೆ ಅವಕಾಶವಿಲ್ಲವಾದುದರಿಂದ ಬೌದ್ಧಮತವನ್ನು ಶಂಕರಾಚಾರ್ಯರು ಖಂಡನಮಾಡಿದರು ಎಂದು ಹೇಳುವದು ಯುಕ್ತವಾಗುವದಿಲ್ಲ.

ಪ್ರ. ಆಚಾರ್ಯರೇ! ನೀವು ಮೇಲೆ ಹೇಳಿದಪ್ರಕಾರಶಂಕರಾಚಾರ್ಯರ ಕಾಲದಲ್ಲಿಯೇ ಕುಮಾರಿಲಭಟ್ಟರು ಬೌದ್ಧಮತದ ಖಂಡನೆ ಮಾಡಿದರು. ಯಾವತ್ತೂ ಬೌದ್ಧರನ್ನು ಕೊಂದು ಹಾಕಿಸಿ ಬಿಟ್ಟರು. ಬೌದ್ಧಜನರೇ ಇಲ್ಲವಾದ ಪ್ರಯುಕ್ತ ಬೌದ್ಧಮತಪ್ರಚಾರವು ಇಲ್ಲ. ಖಂಡನ ಮಾಡಲಿಕ್ಕೆ ಶಂಕರಾಚಾರ್ಯರಿಗೆ ಪ್ರಸಕ್ತಿಯೇ ಇಲ್ಲವೆಂದು ಸಿದ್ಧಿಸಲಿ. ಆದರೆ ಶಂಕರಾಚಾರ್ಯರು ಬೌದ್ಧಮತವನ್ನೇ ಅದ್ವೈತಮತವೆಂದು ಹೆಸರಿಟ್ಟು ಪ್ರಚಾರಮಾಡಿದರು ಎಂದು ಹೇಗೆ ಹೇಳುತ್ತೀರಿ? ಇದಕ್ಕೆ ಆಧಾರವೇನು?

ಪಾ. ‡ ಪಾರ್ವತಿಯು, ತಾಮಸಶಾಸ್ತ್ರಗಳನ್ನು ಯಾರುಯಾರು ಮಾಡಿದ್ದಾರೆ? ಅದನ್ನು ನೀವು ಹೇಳಿರಿ ಎಂದು ರುದ್ರನನ್ನು ಕುರಿತು ಪ್ರಶ್ನೆಮಾಡಲು, ನನ್ನ ಶಕ್ತಿಯಿಂದ ಯುಕ್ತರಾದ ಗೌತುಮಾದಿಗಳಿಂದ ನ್ಯಾಯಶಾಸ್ತ್ರ ಮುಂತಾದ ಗ್ರಂಥಗಳು ಮಾಡಲ್ಪಟ್ಟವು. ವಿಷ್ಣುವು ಬುದ್ಧರೂಪವನ್ನು ಧಾರಣಮಾಡಿ ಬೌದ್ಧಶಾಸ್ತ್ರವನ್ನು ಮಾಡಿದನು. ಯಾವ ಮಾಯಾವಾದ ವೆಂಬ ಅದ್ವೈತಶಾಸ್ತ್ರವು ದುಷ್ಟವಾದುದು ಮತ್ತು ಪ್ರಚ್ಛನ್ನ ಬೌದ್ಧ ಶಾಸ್ತ್ರವೆಂದು ಪ್ರಸಿದ್ಧವಾಗಿದೆಯೋ, ಆಮಾಯಾವಾದ ಶಾಸ್ತ್ರವು ಬ್ರಾಹ್ಮಣರೂಪಿಯಾದ ನನ್ನಿಂದಲೇ ಹೇಳಲ್ಪಟ್ಟಿತು. ಆ ಮಾಯಾವಾದ ಶಾಸ್ತ್ರದಲ್ಲಿ ಶ್ರುತಿಗಳಿಗೆ ಲೋಕನಿಂದಿತವಾದ ಅರ್ಥವನ್ನು ಹೇಳಿ ಜೀವ ಪರಮಾತ್ಮರಿಗೆ ಐಕ್ಯವೂ, ಮತ್ತು ಬ್ರಹ್ಮನು ನಿರ್ಗುಣನೂ, (ಸಕಲ ಧರ್ಮರಹಿತನೂ) ಎಂಮ ಹೇಳಲ್ಪಡುತ್ತದೆ ಎಂದು ಹೇಳಿರುವುದರಿಂದ ಮಾಯಾವಾದಮತವೂ (ಅದ್ವೈತಮತವೂ) ಬೌದ್ಧಮತವೂ ಒಂದೇ ಎಂದು ಗೊತ್ತಾಗುತ್ತದೆ.

---

‡ ಪಾರ್ವತ್ಯುವಾಚಃ–ತಾಮಸಾನಿಚಶಾಸ್ತ್ರಾಣಿ ಸಮಾಚಕ್ಷ್ವ ಮಮಾನಘ॥ ಸಂಪ್ರೋಕ್ತಾನಿಚ ಯೈರ್ವಿಪ್ರೈರ್ಭಗವದ್ಭಕ್ತಿ ವರ್ಜಿತೈಃ॥ ತೇಷಾಂನಾಮಾನಿ ಕ್ರಮಶಃಸಮಾಚಕ್ಷ್ವ ಸುರೇಶ್ವರ॥

ರುದ್ರ ಉವಾಚಃ–ಶ್ರುಣುದೇವಿಪ್ರವಕ್ಷ್ಯಾಮಿ ತಾಮಸಾನಿ ಯಥಾಕ್ರಮಂ॥ ಯೇಷಾಂಸ್ಮರಣಮಾತ್ರೇಣ ಪಾತಿತ್ಯಂಜ್ಞಾನಿನಾಮಪಿ। ಪ್ರಥಮಂ ಹಿ ಮಯಾ ಪ್ರೋಕ್ತಂ ಶೈವಂ ಪಾಶುಪತಾದಿಕಂ॥ ಯಚ್ಛಕ್ತ್ಯಾವೇಶಿತೈರ್ವಿಪ್ರೈಃ ಪ್ರೋಕ್ತಾನಿಚತತಃಶ್ರುಣು॥ ಕಣಾದೇನತು ಸಂಪ್ರೋಕ್ತಂ ಶಾಸ್ತ್ರಂ ವೈಶೇಷಿಕಂ ಮಹತ್। ಗೌತಮೇನತಥಾನ್ಯಾಯಂ ಸಾಂಖ್ಯಂತು ಕಪಿಲೇನವೈ॥ ಧಿಷಣೇನ ಕಥಾಪ್ರೋಕ್ತಂ ಚಾರ್ವಾಕಮತಿಗರ್ಹಿತಂ॥ ದೈತ್ಯಾನಾಂ ನಾಶನಾರ್ಥಾಯ ವಿಷ್ಣುನಾ ಬುದ್ಧ ರೂಪಿಣಾ॥

ಬೌದ್ಧಶಾಸ್ತ್ರಮಸಪ್ರೋಕ್ತಂ ನಗ್ನನೀಲಪಟಾದಿಕಂ। ಮಾಯಾವಾದ ಮಸಚ್ಛಾಸ್ತ್ರಂ ಪ್ರಚ್ಛನ್ನಂ ಬೌದ್ಧಮುಚ್ಯತೇ॥ ಮಯೈವ ಕಥಿಕಂ ದೇವಿ ಕಲೌ ಬ್ರಾಹ್ಮಣ ರೂಪಿಣಾ॥ ಅಪಾರ್ಥಂ ಶ್ರುತಿವಾಕ್ಯಾನಾಂ ದರ್ಶಯನ್ ಲೋಕ ಗರ್ಹಿತಂ॥ ...... ಪರೇಶಜೀವಯೋರೈಕ್ಯಂ ಮಯಾತು ಪ್ರತಿಪಾದ್ಯತೇ॥ ಬ್ರಹ್ಮಣೋಽಸ್ಯ ಸ್ವಯಂರೂಪಂ ನಿರ್ಗುಣಂ ವಕ್ಷ್ಯತೇಮಯಾ।ಸರ್ವಸ್ಯಜಗತೋಽಪ್ಯತ್ರ ಮೋಹನಾರ್ಥಂ। ಕಲೌಯುಗೇ ವೇದಾರ್ಥವನ್ಮಹಾಶಾಸ್ತ್ರಂ ಮಾಯಯಾ ಯದ ವೈದಿಕಂ

§ಮತ್ತು ಬೃಹದ್ಬ್ರಹ್ಮ ಸಂಹಿತೆಯಲ್ಲಿ ೮ ನೇಯ ಅಧ್ಯಾಯದಲ್ಲಿಜ ಗತ್ತು ಮಿಥ್ಯಾ (ಸುಳ್ಳು) ಪರಮಾತ್ಮನು ನಗುರ್ಣನು(ಸಕಲಧರ್ಮರಹಿತನು) ಜೀವನು ಪರಮಾತ್ಮ ನ ಆಭಾಸನು ಎಂಬ ಮತವು ಪಾಷಂಡರಗಳಿಂದ ಹೇಳಲ್ಪಟ್ಟದ್ದು ಈ ಮತವನ್ನು ವಾಸುದೇವನ ಆಜ್ಞೆಯಿಂದ ದೈತ್ಯರಗಳಿಗೆ ಮೋಹನಾರ್ಥವಾಗಿ ನನ್ನಿಂದ ಹೆಳಲ್ಪಟ್ಟಾಗ್ಯಾ ವಿಶ್ವಾಸ ಮಾಡಕೂಡದು ಈ ಮಾಯಾವಾದವು ಮಾಯಾ ಮೋಹ (ಬುದ್ಧ) ನಿಂದಾ ಹೆಳಲ್ಪಟ್ಟದ್ದು, ಎಂದು ಮಾಯಾವಾದವು ಬೌದ್ಧಮತ ವೆಂದು ಹೆಳಲ್ಪಟ್ಟಿದೆ.

ಮತ್ತು "ಯಚ್ಛೂನ್ಯವಾದಿನಾಂ ಶೂನ್ಯಂಬ್ರಹ್ಮ ಬ್ರಹ್ಮವಿದಾಂಚ ಯತ್"ಎಂಬ ಸರ್ವವೇದಾಂತ ಸಿದ್ಧಾಂತಸಾರಸಂಗ್ರಹದ ಶಂಕರಾಚಾರ್ಯರ ವಾಕ್ಯದಲ್ಲಿ ಶೂನ್ಯವಾದಿಗಳ ಶೂನ್ಯವುಯಾವುದೋ, ಬ್ರಹ್ಮವಾದಿಗಳ ಬ್ರಹ್ಮ ಯಾವುದೋ, ಅದನ್ನು ಜ್ಞಾನಿಯುಹೊಂದುತ್ತಾನೆ ಎಂದು ಹೇಳಿರುವುದರಿಂದ, ಶೂನ್ಯವೂ ಬ್ರಹ್ಮವೂ ಒಂದೇ ಎಂತ ಸಿದ್ಧಿಸುವದು. ಆದುದರಿಂದಾ ಅದ್ವೈತ ಮತವು ಬೌದ್ಧಮತವು ಒಂದೆ ಆಗುವದು.

ಮತ್ತು "ಯದ್ಯಪಿ ಬಾಹ್ಯಾರ್ಥ ನಿರಾಕರಣಂ ಜ್ಞಾನಮಾತ್ರಕಲ್ಪನಾಚಾ ದ್ವಯವಸ್ತುಸಾಮೀಪ್ಯ ಮುಕ್ತಂ ಜ್ಞಾನಜ್ಞೇಯಜ್ಞಾತೃಭೇದರಹಿತಂ ಪರಮಾರ್ಥತತ್ವ ಮದ್ವಯಮೆತನ್ನಬುದ್ಧೇನ ಭಾಷಿತಂ, ಇದಂತು ಪರಮಾರ್ಥ ತತ್ವಮದ್ವೈತಂ ವೇದಾಂತೆಷ್ವೇವ ವಿಜ್ಞೇಯಮಿತಿ" ಎಂಬ ಶಂಕರಾಚಾರ್ಯರ ವಾಕ್ಯದಿಂದಲೂ "ಜ್ಞಾನಂ ನೈತದ್ಬುದ್ಧೇನಭಾಷಿತಂ" ಎಂಬ ಗೌಡಪಾದರವಾಕ್ಯ ದಿಂದಲೂ "ಜ್ಞಾನಮಾತ್ರಂ ಪಾರಮಾರ್ಥಿಕಂ ತತ್ರೈವ ಜ್ಞಾತೃಜ್ಞೇಯಾದಿ ಕಲ್ಪಿತಮಿತಿ ಸೌಗತ ಮತಮೇವ ಭವತಾಪಿ ಸಂಗೃಹೀತ ಮಿತ್ಯಾಶಂಕ್ಯಾಹ" ಎಂಬ ಆನಂದಗಿರಿ ಟೀಕಾ ವಾಕ್ಯಗಳಿಂದಲೂ ಶಂಕರಾಚಾರ್ಯರ ಪರಮಗುರುಗಳಾದ ಗೌಡಪಾದಾಚಾರ್ಯರ ಕಾಲದಲ್ಲಿಯೇ (ಯಾವ ಕಾಲದಲ್ಲಿ ಅದ್ವೈತ ಮತವು ಪ್ರಚಾರಕ್ಕೆ [ಹೊರಗೆ] ಬಂತೊ ಆಕಾಲದಲ್ಲಿಯೇ) ಜ್ಞಾನ ಒಂದೇ ತತ್ವವು. ಬ್ರಾಹ್ಮಣಾದಿವರ್ಣ ಮೊದಲಾದ ಯಾವತ್ತೂ ಜಗತ್ತೂ ಆ ಜ್ಞಾನ ದಲ್ಲಿ ಕಲ್ಪಿತವು ಎಂಬ ಅದ್ವೈತಮತವು, ಬೌದ್ಧಮತವೇ ಎಂದು ಆಗಿನಕಾಲದ

---

§ ರಾಜನ್ನಾರ್ಯಸ್ಯ ಮಿಥ್ಯಾತ್ವಂ ನೈರ್ಗುಣ್ಯಂ ಪರಮಾತ್ಮನಃ ‖ ಆಭಾಸವಾದೊ ಜೀವಸ್ಯ ಪಾಷಂಡೈರುಪಕಲ್ಪಿತಃ ‖ ನೈತದ್ವಿಶ್ವಸನೀಯಂತೆ ಮಯೋಕ್ತಮಪಿಮಾಯಯಾ ‖ ಆಜ್ಞಯಾವಾಸುದೇವಸ್ಯ ಮೋಹನಾಯಸುರದ್ವಿಷಾಂ ‖ ಪ್ರವರ್ತಿಗ ಮಸಚ್ಛಾಸ್ತ್ರ ಮಯಥಾರ್ಥಸ್ಯಶಾಸನಾತ್...... ಮಾಯಾವಾದ ಮಿದಂಶಾಸ್ತ್ರಂ ಮಾಯಾಮೋಹ ಪ್ರವರ್ತಿತಂ ‖

ವಿದ್ವಾಂಸರು ಹೇಳಿದರುಎಂತ ತಿಳದ್ದರಿಂದ, ಬೌದ್ಧಮತವನ್ನೇ ಅದ್ವೈತಮತದವರು ಸ್ವೀಕರಿಸಿದರು ಎಂತಹೇಳುತ್ತೆವೆ.

ಶಂಕರಾಚಾರ್ಯರ ಸಮಕಾಲೀನರಾದ ಭಾಸ್ಕರಾಚಾರ್ಯರು ೨-೨-೨೯ ನೇ "ವೈಧರ್ಮ್ಯಾಚ್ಚನ ಸ್ವಪ್ನಾದಿವತ್" ಎಂಬ ಬ್ರಹ್ಮಸೂತ್ರಭಾಷ್ಯದಲ್ಲಿ "ಯೆತುಬೌದ್ಧಮತಾವಲಂಬಿನೊ ಮಾಯಾವಾದಿನಸ್ತೈಪ್ಯನೆ ನನ್ಯಾಯೇನ ಸೂತ್ರಕಾರೇಣ್ಯೈವ ನಿರಸ್ತಾವೇದಿತವ್ಯಾಃ" ಎಂಬವಾಕ್ಯದಿಂದ ಮತ್ತು ೧-೪-೨೫ ನೇ ಬ್ರಹ್ಮಸೂತ್ರಭಾಷ್ಯದಲ್ಲಿಯೂ "ಮಹಾಯಾನಿಕ ಬೌದ್ಧಗಾಥಿತಂ ಮಾಯಾವಾದಂ ವ್ಯಾವರ್ಣಯಂತೋ ಲೋಕಾನ್ ವ್ಯಾಮೋಹಯಂತಿ" ಎಂಬ ವಾಕ್ಯದಿಂದ ಅದ್ವೈತಮತವು (ಮಾಯಾವಾದಮತವು) "ಬೌದ್ದಮತವು" ವಂದೇ ಎಂತಲೂ ಸೂತ್ರಕಾರರಿಂದ ನಿರಾಕರಣ ಮಾಡಲ್ಪಟ್ಟಿದೆ ಎಂತಲೂ ಹೇಳಿದ್ದಾರೆ?

ವಿಜ್ಞಾನ ಬಿಕ್ಷುಗಳೂಕೂಡ ತಾವು ಮಾಡಿದ ಸೂತ್ರಭಾಷ್ಯದಲ್ಲಿ "ಯೆತು ರಜ್ಜುಸರ್ಪಾದಿವತ್ ಪ್ರಪಂಚಸ್ಯಾತ್ಯಂತತುಚ್ಛತ್ವಮಿಚ್ಚಂತಿ ತೆತು ಬೌದ್ಧ ಪ್ರಭೆದಾ ಏವ, ಮಾಯಾವಾದ ಮಸಚ್ಛಾಸ್ತ್ರಂ ಪ್ರಚ್ಛನ್ನಂ ಬೌದ್ಧಮುಚ್ಯತೆ" ಇತ್ಯಾದಿ ಪುರಾಣವಚನಾತ್ ಅಸತ್ಯಮಪ್ರತಿಷ್ಠಂತೆ ಜಗದಾಹುರ ನೀಶ್ವರಂ ಇತಿ ಗೀತಾವಚನಾತ್" ಎಂಬ ವಾಕ್ಯಗಳಿಂದ ಅದ್ವೈತಮತವು ಬೌದ್ಧಮತವೆಂದು ಪದ್ಮಪುರಾಣ, ಗೀತಾವಾಕ್ಯ ಸಂಮತಿ ಕೊಟ್ಟು ಹೇಳಿದ್ದಾರೆ. ಇವರೇ ಸಾಂಖ್ಯಪ್ರವಚನ ಭಾಷ್ಯದ ಉಪಕ್ರಮದಲ್ಲಿ ಮಾಯಾವಾದಮತವು ಬೌದ್ಧ ಮತವೇ ಎಂದು ಹೇಳಿದ್ದಾರೆ. ಪಾರ್ಥಸಾರಥಿಮಿಶ್ರರು "ಶಾಸ್ತ್ರದೀಪಿಕಾ" ಗ್ರಂಥದಲ್ಲಿ "ತದ್ವರಂ ಅಸ್ಮಾನ್ಮಾಯಾವಾದಾತ್ ಮಹಾಯಾನಿಕವಾದಃ" ಎಂದು ಅದ್ವೈತಮತಕ್ಕಿಂತ ಬೌದ್ಧಮತವೇ ಉತ್ತಮವಾದದ್ದು, ಅದ್ವೈತಮತವು ಬೌದ್ಧಮತಕ್ಕಿಂತ ನಿಕೃಷ್ಟವಾದದ್ದು ಯೆಂದು ಹೇಳಿದ್ದಾರೆ. ಮತ್ತು ಆನಂದಗಿರಿ ಶಂಕರವಿಜಯ ದಲ್ಲಿ ಕುಮಾರಿಲಭಟ್ಟರು ಶಂಕರಾಚಾರ್ಯರನ್ನು ಕುರಿತು "ಸೂತನೊ ಬೌದ್ಧತರಃ" ಸೂತಸನಾದ ಬೌದ್ಧಶ್ರೇಷ್ಠನೇಎಂತ ಹೇಳಿದರು ಎಂತ ಹೇಳಿದ್ದಾರೆ. ರಾಮಾನುಜಾಚಾರ್ಯ ಮೊದಲಾದ ಅನೇಕ ಗ್ರಂಥಕಾರರೂ ಅದ್ವೈತಮತವು ಬೌದ್ಧಮತವೇ ಎಂತ ಹೇಳಿದ್ದಾರೆ. ಇಷ್ಟೇ ಅಲ್ಲದೆ ಸರ್. ಎಸ್. ರಾಧಾಕೃಷ್ಣ ಮೊದಲಾದ ಆಂಗ್ಲಭಾಷಾ ಪಂಡಿತರೂಕೂಡ ಈಗ್ರಂಥಗಳನ್ನೆಲ್ಲಾ ಪರ್ಯಾಲೋಚಿಸಿ ಅದ್ವೈತಮತವು ಬೌದ್ಧಮತವೆಂದು ನಿರೂಪಣಮಾಡಿದ್ದಾರೆ. ಇವೇಮೊದಲಾದ ಅನೇಕ ಆಧಾರಗಳಿಂದ ಅದ್ವೈತಮತವು ಬೌದ್ಧಮತವೆಂದು ನಿಶ್ಚಯವಾಗುತ್ತದೆ.

ಪ್ರ. ಪ. ಆಚಾರ್ಯರೇ, ತಮ್ಮ ಮಾತುಗಳನ್ನು ಕೇಳಿದರೆ ನನಗೆ ನಗುವು

ಬರುತ್ತದೆ. ಇದರಂತೆ ಕೋರ್ಟಿನವರಿಗೂ ಬರಬಹುದು ಎಂದು ತೋರುತ್ತದೆ. ಏಕೆಂದರೆ, ಎಲ್ಲಾಮತಗಳಿಗೂ ಪ್ರತಿವಾದಿಗಳು ಇರುವರು. ಅದ್ವೈತಮತಕ್ಕೆ ಆಗಿನ ಕಾಲದಿಂದಲೂ ಪ್ರತಿವಾದಿಗಳು ಇದ್ದಾರೆ ಅವರು ಅದ್ವೈತಮತಕ್ಕೆ ಅವೈದಿಕವಾದ ಬೌದ್ಧಮತವೆಂದು ನಿಂದಿಸಿರಬಹುದು. ಈಗಲೂ ನಿಂದಿಸ ಬಹುದು. ದ್ವೇಷಮೂಲಕವಾದ ಆ ನಿಂದಕವಾದ ವಾಕ್ಯಗಳು ಪ್ರಮಾಣಗಳು (ಖರೆ ಪ್ರಮೇಯಗಳನ್ನ ತಿಳಿಸುತ್ತವೆ) ಎಂಬುವುದನ್ನು ಹೇಗೆ ನಂಬುವುದು. ನಿಮ್ಮಮತಕ್ಕೆ ನಿಂದಕರು ಇಲ್ಲವೋ? ಕೆಲವರು ದ್ವೇಷಮೂಲಕವಾಗಿ ಅದ್ವೈತಮತವು ಬೌದ್ಧಮತವು ಒಂದೇ ಎಂತ ಹೇಳುವ ವಾಕ್ಯದಿಂದ ಅದ್ವೈತಮತವು ಬೌದ್ಧಮತವೇ ಎಂದು ನಿಶ್ಚಯವಾಗುವದಿಲ್ಲವೆಂದು ಸಣ ಹುಡುಗರಿಗೂಕೂಡ ತಿಳಿಯುವದು. ನಿಂಮ್ಮಂಥ ವಿದ್ವಾಂಸರು ದ್ವೇಷಿಗಳಮಾತುಗಳನ್ನು ಮುಖ್ಯವಾಗಿ ಇಟ್ಟುಕೊಂಡು "ಅದ್ವೈತಮತವು ಬೌದ್ಧಮತವೇ" ಎಂದು ಹೇಳಬಹುದೇ?

ವಾದಿ. ಜಡ್ಜಿಯವರು ಈವಿಷಯುವನ್ನು ಚಿತ್ತೈಸಬೇಕು.

ವಾದಿ. ವಕೀಲರೆ, ಕೋರ್ಟಿನಲ್ಲಿ ಒಬ್ಬನು ಒಂದು ವಿಷಯದಲ್ಲಿ ಸಾಕ್ಷಿಯನ್ನು ಹೇಳಿದರೆ ಈಸಾಕ್ಷಿಯುಸತ್ಯ (ಖರೇ) ಹೇಳುತ್ತಾನೆ. ಎಂಬ ವಿಷಯದಲ್ಲಿ ಮತ್ತೊಬ್ಬಸಾಕ್ಷಿಯು ಬೇಕಾಗುವುದೇ?

ಪ್ರ. ವ. ಇಲ್ಲ. ಒಬ್ಬ ಸಾಕ್ಷಿಯುಹೇಳಿದಮೇಲೆ ಅದಕ್ಕೆ ಬಾಧಕವಿಲ್ಲದೇ ಹೋದರೆ, ಅದನ್ನ ಖರೇ ಎಂತಲೇ ಒಪ್ಪಬೇಕು. ಅವನು ಅಥನಾಥಮನೇ ಆಗಲೀ, ದೊಡ್ಡಮನುಷ್ಯನೇ ಆಗಲಿ ಬಾಧಕಬಂದರೇನೇ ಅವನು ಹೇಳಿದ್ದು ಸುಳ್ಳೆಂದು ತಿಳಿಯಬೇಕು. ಅವಕ್ಕಾಗಿಯೇ ಕೋರ್ಟಿನಲ್ಲಿ ಸಾಕ್ಷಿಯು ಹೇಳಿದಮೇಲೆ ಅದಕ್ಕೆ ಬಾಧಕವುವುಂಟೆಂದು ತಿಳಿಸುವುದಕ್ಕೋಸ್ಕರವೇ "ನಿನಗೂ ವಾದಿಗೂ ಬಂಧುತ್ವವು ಉಂಟೇ ಹ್ಯಾಗೆ" ಎಂದು ಕೇಳುತ್ತೇವೆ. ಬಂಧುತ್ವವು ಉಂಟೆಂದು ಹೇಳಿದರೆ, ಈಸಾಕ್ಷಿಯು ಅವನಲ್ಲಿ ಸ್ನೇಹ (ರಾಗ) ಮೂಲಕ ಹೇಳುತ್ತಾನೆ. ಇವನಮಾತು ನಂಬತಕ್ಕದ್ದಲ್ಲ ಎಂದು ವ್ಯವಸ್ಥಾ ಮಾಡಲ್ಪಡುತ್ತದೆ.

ಅಥವಾ "ನಿನಗೂ ಪ್ರತಿವಾದೀಗೂ ವಿರೋಧಉಂಟೇ, ನೀನು ಪ್ರತಿವಾದಿ ಸಂಗಡ ಕಲಹಮಾಡಿದಕಾರಣ ನಿನ್ನಮೇಲೆ ಮ್ಯಾಜಿಸ್ಟ್ರೇಟು ಕೇಸು ಆಗಿತ್ತಷ್ಟೆ" ಎಂತ ಕೇಳಿದ್ದಕ್ಕೆ "ಹೌದು. ನಾನು ಪ್ರತಿವಾದಿಯ ಸಂಗಡ ಕಲಹಮಾಡಿಕೊಂಡು ಮ್ಯಾಜಿಸ್ಟ್ರೇಟು ಕೋರ್ಟಿಗೆ ಹೋಗಿದ್ದೆ" ಎಂತ ಹೇಳಲು, ಇವನಿಗೂ ಪ್ರತಿವಾದಿಗೂ ದ್ವೇಷವಿದೆ, ದ್ವೇಷಮೂಲಕ ಹೇಳು

ತ್ತಾನೆ. ನಿಜವನ್ನು ಹೇಳುವದಿಲ್ಲ ಎಂತ ಏರ್ಪಟ್ಟು, ಆ ಸಾಕ್ಷಿಯು ಕೆಟ್ಟು ಹೋಗುತ್ತದೆ. "ನೀನು ವಾದಿಮನೆಯಲ್ಲಿ ಊಟಮಾಡುತ್ತೀಯಷ್ಟೆ" ಎಂತ ಪ್ರಶ್ನಮಾಡಿದ್ದಕ್ಕೆ "ಹೌದು" ಎಂತ ಸಾಕ್ಷಿದಾರನು ಹೇಳಲು, ಇವನು ವಾದಿಮನೆಯಲ್ಲಿ ಭೋಜನಮಾಡುತ್ತಾನೆ ಇವನಂತೆ ಸುಳ್ಳು ಸಾಕ್ಷಿ ಹೇಳದೇ ಹೋದರೆ ಅನ್ನಹಾಕುವದಿಲ್ಲವೆಂಬ ಅಭಿಪ್ರಾಯದಿಂದ ಸುಳ್ಳು ಹೇಳುತ್ತಾನೆ. ಎಂದು ಸಿದ್ಧವಾಗುತ್ತದೆ. ಇವನಗಿಂತಲೂ, ಜ್ಞಾನದಿಂದಲೂ ಕರ್ಮದಿಂದಲೂ ಧನದಿಂದಲೂ ದೊಡ್ಡವನು ಮತ್ತು ಸತ್ಯವಾದ ಮಾತು ಆಡತಕ್ಕವನು ಎಂತ ಪ್ರಸಿದ್ಧನಾದ ಸಾಕ್ಷಿದಾರನು ಈಸಾಕ್ಷಿಗೆ ವಿರುದ್ಧವಾಗಿ ಹೇಳಿದರೆ, ಈ ಮೊದಲನೇ ಸಾಕ್ಷಿದಾರನು ಹೇಳಿದ್ದು ಸುಳ್ಳು ಎಂತ ನಿಶ್ಚಯವಾಗುತ್ತದೆ. ಆ ಯಾವ ಬಾಧಕವೂ ಇಲ್ಲದೇ ಹೋದರೆ, ಯಾವ ಸಂಣ ಮನುಷ್ಯನಾದರೂ, ಅವನ ಸಾಕ್ಷಿಯೇ ಪ್ರಮಾಣವಾಗುತ್ತದೆ.

ವಾದಿ. ಹರಿಹರಶರ್ಮ ವಕೀಲರೇ! ಪ್ರಕೃತ ನಂಮ ಅಭಿಪ್ರಾಯವೂ ಅದೇ ಆಗಿದೆ. ಒಬ್ಬನು ಸಾಕ್ಷಿಹೇಳಿದ್ದಕ್ಕೆ ವಿರುದ್ಧವಾಗಿ ಇನ್ನೊಂದು ಸಾಕ್ಷಿ ಮೊದಲಾದ್ದು ಬರದೇಹೋದರೆ, ಮೊದಲು ಹೇಳಿದ್ದೇ ಸತ್ಯವಾದದ್ದು ಎಂತ ಕೋರ್ಟಿನಲ್ಲಿ ಹ್ಯಾಗೆ ಒಪ್ಪುತ್ತಾರೋ ಹಾಗೆಯೇ, ಯಾವದೇ ವಾಕ್ಯವಾಗಲಿ, ಪ್ರತ್ಯಕ್ಷವಾಗಲಿ, ಅನುಮಾನವಾಗಲಿ, ಯಾವ ಅರ್ಥವನ್ನು ಹ್ಯಾಗೆ ತಿಳಿಸುತ್ತದೆಯೋ, ಬಾಧಕವಿಲ್ಲದೇ ಹೋದರೆ ಆ ಅರ್ಥವು ಹಾಗೆ ಉಂಟು ಎಂತ ತಿಳಿದುಕೊಳ್ಳತಕ್ಕದ್ದು ಎಂಬುವುದೆ ಸ್ವತಃ ಪ್ರಾಮಾಣ್ಯವನ್ನವಪ್ಪುವದು. ಪರತಃ ಅಪ್ರಮಾಣ್ಯವಪ್ಪುವುದು ಅಂದರೆ, ಬಾಧಕಬಂದರೆ ಆ ವಾಕ್ಯ ಮೊದಲಾದವುಗಳಿಂದ ತಿಳಿದ ಪದಾರ್ಥವು ಸುಳ್ಳು ಎಂತ ತಿಳಿಯತಕ್ಕದ್ದು. ಬಾಧಕ ಇಲ್ಲದೇನೇ ಪ್ರತ್ಯಕ್ಷದಿಂದಾಗಲಿ ಅನುಮಾನದಿಂದಾಗಲಿ, ಆಗಮದಿಂದಾಗಲಿ ಪದಾರ್ಥಗಳು ಹೇಗೆ ಉಂಟು ಎಂತ ಹೇಳಲ್ಪಡುತ್ತದೊ ಹಾಗೆ ಪದಾರ್ಥವು ಇಲ್ಲವೆಂದು ನಿಶ್ಚಯಿಸಕೂಡದು ಯಂತ ದ್ವೈತಾದ್ವೈತ ವಾದಿಗಳು ವಪ್ಪುತ್ತೇವೆ ಯಾದಕಾರಣ, ಪ್ರಕೃತಕ್ಕೆ ಭಾಸ್ಕರಾಚಾರ್ಯರು, ವಿಜ್ಞಾನಭಿಕ್ಷುಗಳು, ರಾಮಾನುಜಾಚಾರ್ಯರು, ಭಟ್ಟಕುಮಾರರು, ಪಾರ್ಥಸಾರಥಿಮಿಶ್ರ ಮೊದಲಾದ ಪಂಡಿತರುಗಳು ಅದ್ವೈತಮತವು ಬೌದ್ಧಮತವೇ ಎಂತ ಹೇಳಿದ್ದಾರೆ. ಅದಕ್ಕೆ ಬಾಧಕವಿಲ್ಲವಾದ ಕಾರಣ, ಭಾಸ್ಕರಾಚಾರ್ಯ ಮೊದಲಾದವರು ಹೇಳಿದ್ದು ನಿಜವೆಂದೇ ಒಪ್ಪಬೇಕಾಗಿದೆ. ಇಷ್ಟು ಮಾತ್ರವಲ್ಲದೆ ಪದ್ಮಪುರಾಣ ಮೊದಲಾದ ಪುರಾಣಗಳಲ್ಲಿ ಸಾಕ್ಷಾತ್ ನಾರಾಯಣಾವತಾರರಾದ ವೇದವ್ಯಾಸ ದೇವರೇ ಮೊದಲಾದವರು ಅದ್ವೈತ

ಮತವು ಬೌದ್ಧಮತವೆಂದು ಹೇಳಿದ್ದಾರೆ.

ಗೌಡಪಾದಾಚಾರ್ಯರು, ಶಂಕರಾಚಾರ್ಯರು, ಮೊದಲಾದ ಅದ್ವೈತಿಗಳೂಕೂಡ, ಅದ್ವೈತಮತಕ್ಕೆ ಬೌದ್ಧಮತದ ಸಾಮ್ಯ ಉಂಟು ಎಂತ ಹೇಳಿದ್ದಾರೆ. ಅದಕ್ಕೆ ಬೌದ್ಧರು "ಚೀನಾದೇಶದಲ್ಲಿದ್ದಾರೆ, ನಾವು ಭರತಖಂಡದಲ್ಲಿದ್ದೇವೆ. ಬೌದ್ಧರು ಕರೇ ಬಟ್ಟೆಗಳನ್ನು ಉಪಯೋಗಿಸುತ್ತಾರೆ. ನಾವು ಬಿಳೀ ಬಟ್ಟೆಗಳನ್ನು ಉಪಯೋಗಿಸುತ್ತೇವೆ. ಅವರು ಭಸ್ಮ (ಬೂದಿ) ಧಾರಣ ಮಾಡುವದಿಲ್ಲ. ನಾವು ಭಸ್ಮಧಾರಣ ಮಾಡುತ್ತೇವೆ. ಅವರ ಭಾಷೆಯೇಬೇರೆ. ನಂಮ ಭಾಷೆಯೇಬೇರೆ. ಇವೇ ಮೊದಲಾದ ಅನುಪಯುಕ್ತವಾದ ವಿಷಯದಲ್ಲಿ ಭೇದವನ್ನ (ವೈಷಮ್ಯವನ್ನ) ಹೇಳದಲೆ, ಬ್ರಹ್ಮ, ಜಗತ್ತು, ಮೋಕ್ಷಸಾಧನ, ವೇದ ಪ್ರಮಾಣ, ಅಪ್ರಮಾಣ, ಇಂಥಾ ಮುಖ್ಯವಿಷಯಗಳಲ್ಲಿ ಬೌದ್ಧಮತಕ್ಕೂ ಅದ್ವೈತಮತಕ್ಕೂ ವೈಷಮ್ಯ ಉಂಟು, ಸಾಮ್ಯ ಇಲ್ಲಾ ಎಂಬುವುದನ್ನು ಎಲ್ಲೀವರಿಗೂ ತೋರಿಸುವದಿಲ್ಲವೋ, ಅಲ್ಲೀವರೆಗೂ ಅದ್ವೈತಮತವು ಬೌದ್ಧಮತವೆಂಬುದು ಹೋಗಲಾರದು. ಬೌದ್ಧಮತಕ್ಕೂ ಅದ್ವೈತಮತಕ್ಕೂ ಅಂಥಾ ವೈಷಮ್ಯ ಇಲ್ಲವೆಂದು ನನ್ನ ಅಭಿಪ್ರಾಯವು.

ಪ್ರ. ಪ. ಆಚಾರ್ಯರೆ, ಆಸ್ತಿಕ ಶಿರೋಮಣಿಗಳಾದ ನಂಮ ಅದ್ವೈತಮತದಲ್ಲಿ ವೇದೋಕ್ತ ವಾದ ಬ್ರಾಹ್ಮಣಾದಿ ವರ್ಣಗಳನ್ನೂ, ಬ್ರಹ್ಮಚರ್ಯಾದ್ಯಾಶ್ರಮಗಳನ್ನೂ, ಸ್ನಾನ, ಸಂಧ್ಯಾ, ಭಗವತ್ಪೂಜಾ ಯಜ್ಞ ದಾನಾದಿಗಳನ್ನೂ ಮಾಡುತ್ತಾ ಕರ್ಮಗಳಿಂದ ಶುದ್ಧಾಂತಃ ಕರಣರಾಗಿ, ಶ್ರವಣ, ಮನನ, ಧ್ಯಾನಮಾಡಿ, ಪರಮಾತ್ಮನ ಅಪರೋಕ್ಷವನ್ನು ಹೊಂದಿ ಬ್ರಹ್ಮಭಾವರೂಪ ಮೋಕ್ಷವನ್ನು ಹೊಂದತಕ್ಕದ್ದು ಎಂತ ಹೇಳಿದೆ. ಬೌದ್ಧಮತದಲ್ಲಿ ವೇದವು ಮಿಥ್ಯ (ಸುಳ್ಳು). ಅದಕ್ಕೆ ಪ್ರಾಮಾಣ್ಯವು ಇಲ್ಲ. ಬ್ರಾಹ್ಮಣಾದಿ ವರ್ಣಗಳು ಇಲ್ಲ. ಬ್ರಹ್ಮಚರ್ಯಾದ್ಯಾಶ್ರಮಗಳು ಇಲ್ಲ. ಸ್ನಾನಸಂಧ್ಯಾ ಭಗವತ್ಪೂಜಾ, ಯಜ್ಞದಾನಾದಿಗಳು ಇಲ್ಲ. ಬ್ರಹ್ಮಭಾವಪ್ರಾಪ್ತಿ ರೂಪ ಮೋಕ್ಷವೂ ಇಲ್ಲ. ಇಂಥಾ ಬೌದ್ಧಮತವೇ ಅದ್ವೈತಮತವೆಂತ ಹೇಳುವುದನ್ನು ನೋಡಿದರೆ, ಇವತ್ತೇ ಏಕಾದಶೀ ಇರೋಣದರಿಂದ ನಿಮಗೆ ಪಿತ್ತವಾದಂತೆ ತೋರುತ್ತದೆ. (ಸ್ವಾಮಿ ಕೋಪಿಕೊಳ್ಳಸಬಾರದು) ಸಾವಕಾಶವಾಗಿ ಯೋಚನೆಮಾಡಿ ಹೇಳಿ.

ಕೋರ್ಟ್. ಆಚಾರ್ಯರೇ, ಶಾಸ್ತ್ರಿಗಳು ಹೇಳುವಪ್ರಕಾರ ಅದ್ವೈತಮತವು ಪರಮ ಆಸ್ತಿಕವಾದ ವೈದಿಕಮತವಂತೆ ತೋರುತ್ತದೆ. ಬೌದ್ಧರು ಅವೈದಿಕರು. ವೇದ ಪ್ರಾಮಾಣ್ಯವನ್ನ ಒಪ್ಪುವುದಿಲ್ಲ. ವೇದೋಕ್ತವಾದ ಯಜ್ಞಗಳನ್ನು ಒಪ್ಪುವದಿಲ್ಲ. ಅಂದಮೇಲೆ ಅದ್ವೈತಮತವು ಬೌದ್ಧಮತನ್ನುವುದನ್ನುವೆ

ಹೇಗೆ ಹೇಳುತ್ತೀರೀ ಎಂದು ಪ್ರತಿವಾದಿಗಳು ಕೇಳಿದ್ದಕ್ಕೆ ಉತ್ತರವನ್ನಾ ಕೊಡಿ.

ವಾದಿ. ಧರ್ಮರಾಜರೇ ಅಪ್ಪಣೆ ಆದರೆ ಹೇಳುತ್ತೇನೆ. ತಾವು ಚಿತ್ತೈಸಿ ಕೇಳಬೇಕು.

ವಾದಿ. ಶಾಸ್ತ್ರಗಳೇ ಆಸ್ತಿಕರು ಎಂದರೆ ಯಾರು? ನಾಸ್ತಿಕರು ಎಂದರೆ ಯಾರು?

ಪ್ರ. ವಾ. ಪರಲೋಕ ಉಂಟು; ಅದಕ್ಕೆ ಸಾಧನಗಳುಂಟು, ದಾತಾ ಈಶ್ವರನು ಇದ್ದಾನೆ. ಎಂಬ ಬುದ್ಧಿ ಉಳ್ಳವನು ಆಸ್ತಿಕನು. ಪರಲೋಕವು ಇಲ್ಲ. ಪರಲೋಕ ಸಾಧನ ವಿಲ್ಲ, ಪರಲೋಕ ದಾತ ಈಶ್ವರನು ಇಲ್ಲ=ಮಿಥ್ಯಾ ಎಂಬ ಬುದ್ಧಿ ಉಳ್ಳವನು ನಾಸ್ತಿಕನು.

ವಾದಿ. ಸ್ವರ್ಗಾದಿ ಪರಲೋಕಗಳು ಇಲ್ಲ. ಅದಕ್ಕೆ ಸಾಧಕವಾದ ಯಜ್ಞಾದಿ ಗಳು ಇಲ್ಲ. ಅದಕ್ಕೆ ದಾತೃನಾದ ಈಶ್ವರನು ಇಲ್ಲ ಎಂತ ಹೇಳುವರು ಆಸ್ತಿಕರೋ? ನಾಸ್ತಿಕರೋ?

ಪ್ರ. ವಾ. ಸ್ವರ್ಗಾದಿ ಪರಲೋಕ, ಅದಕ್ಕೆ ಸಾಧಕವಾದ ಯಜ್ಞಾದಿಗಳು ಫಲದಾತೃನಾದ ಈಶ್ವರನು ಇಲ್ಲ ಎಂಬುವರು ನಾಸ್ತಿಕರೇ ಸಂಶಯವಿಲ್ಲಾ.

ವಾದಿ. ಪರಲೋಕವು ಇಲ್ಲ. ಈ ಪ್ರತ್ಯಕ್ಷಸಿದ್ಧವಾದ ಲೋಕವು ಇಲ್ಲ ಎಂಬು ವರು ನಾಸ್ತಿಕರೆ? ಆಸ್ತಿಕರೆ?

ಪ್ರ. ವಾ. ಪರಲೋಕವಿಲ್ಲ. ಈಲೋಕವಿಲ್ಲ ಎಂಬುವರು ನಾಸ್ತಿಕರು ಇಷ್ಟೇ ಯಾಕೆ? ನಾಸ್ತಿಕ ನಾಸ್ತಿಕರು (ಮಹಾನಾಸ್ತಿಕರು).

ವಾದಿ. ಬೌದ್ಧಮತದವರು ಈಲೋಕವು, ಪರಲೋಕವು, ಅವುಗಳ ಸಾಧನ ಗಳು ಮಿಥ್ಯಾ ಎಂದು ಹೇಳುತ್ತಾರಾದ ಕಾರಣ ಅವರು ನಾಸ್ತಿಕನಾಸ್ತಿಕ ರಷ್ಟೆ?

ಪ್ರ. ವಾ. ಸಂಶಯವೇನು. ಬೌದ್ಧರು ಪರಮ ನಾಸ್ತಿಕರೇ.

ವಾದಿ. ಶಾಸ್ತ್ರಗಳೆ "ಬ್ರಹ್ಮಸತ್ಯಂ ಜಗನ್ಮಿಥ್ಯಾ ಜೀವೋಬ್ರಹ್ಮೈವ ನಾಪರಃ" ಎಂಬ ಶ್ಲೋಕವು ಯಾರು ಹೇಳಿದ್ದು?

---

§ ಅಸ್ತಿಪರಲೋಕ ಇತಿಬುದ್ಧಿರ್ಯಸ್ಯಸ ಆಸ್ತಿಕಃ। ನಾಸ್ತಿಪರಲೋಕ ಇತಿಬುದ್ಧಿರ್ಯಸ್ಯಸ ನಾಸ್ತಿಕಃ॥ "ಮಿಥ್ಯಾದೃಷ್ಟಿರ್ನಾಸ್ತಿಕತಾ"

ಪ್ರ. ವಾ. ನಂಮ ಶಂಕರ ಭಗವತ್ಪಾದರೇ ಹೇಳಿದ್ದು.

ವಾದಿ. ಅದರ ಅಭಿಪ್ರಾಯವೇನು?

ಪ್ರ. ವಾ. ಬ್ರಹ್ಮ ಒಬ್ಬನೇ ಸತ್ಯನು. ಆ ಬ್ರಹ್ಮನಲ್ಲಿ ಬ್ರಾಹ್ಮಣಾದಿವರ್ಣ, ಬ್ರಹ್ಮಚರ್ಯಾದ್ಯಾಶ್ರಮ, ಸ್ನಾನ ಸಂಧ್ಯಾ ಯಜ್ಞ, ವೇದ, ದಾನ, ತೀರ್ಥ ಸ್ವರ್ಗಾದಿ ಪರಲೋಕ ಈಲೋಕ ಮುಂತಾದ ಯಾವತ್ತು ಜಗತ್ತು ಕಲ್ಪಿತವು (ಸುಳ್ಳು) ಜೀವನು ಬ್ರಹ್ಮನೇ ಎಂದು ಅಭಿಪ್ರಾಯವು.

ವಾದಿ. ಬ್ರಾಹ್ಮಣವರ್ಣಾದಿ ಯಾವತ್ತು ಜಗತ್ತು ಕಲ್ಪಿತವೆಂದರೇನು ಅರ್ಥವು

ಪ್ರ. ವಾ. ಆಚಾರ್ಯರೆ, ಇದು ಪ್ರಸಿದ್ಧವಿಷಯವು. ಆದರೂ ಕೇಳುತ್ತೀರಿ ಆದ್ದರಿಂದಾಹೇಳುತ್ತೇನೆ ಕೇಳಿರಿ. ಶಿಂಪಿಯಲ್ಲಿ ವಾಸ್ತವವಾಗಿಇಲ್ಲದೇ ಇರುವ ರಜತವು, ಹೇಗೆ ಅಜ್ಞಾನದಿಂದ ತೋರುತ್ತದೇಯೋ, ಹಗ್ಗದಲ್ಲಿ ವಾಸ್ತವ ವಾಗಿಇಲ್ಲದೇ ಇದ್ದ ಸರ್ಪವು ಹೇಗೆತೋರುತ್ತದೇಯೋ, ಸ್ವಪ್ನದಲ್ಲಿ ಇಲ್ಲದೇ ಇದ್ದವಸ್ತುಗಳು ಹೇಗೆ ತೋರುತ್ತವೆಯೋ ಹಾಗೆ ಎಂದಿಗೂ ಇಲ್ಲದೇ ಇದ್ದ ಬ್ರಾಹ್ಮಣಾದಿವರ್ಣ ಮೊದಲಾದ ಜಗತ್ತು ಅಜ್ಞಾನದಿಂದ ತೋರುತ್ತದೆ. ವಸ್ತುತಃ ಜಗತ್ತು ಮೂರುಕಾಲದಲ್ಲಿಯೂ ಇಲ್ಲವೇಇಲ್ಲೆಂದು ಅರ್ಥವು.

ವಾದಿ. ಶಾಸ್ತ್ರಿಗಳೇ ಈದಿನ ಶಿವರಾತ್ರಿ ಇರೋಣದರದಿಂದ ತಂಮ ಮನಸ್ಸು ಸ್ಥಿರವಿದ್ದಂತೆ ತೋರುವುದಿಲ್ಲ. ಈಲೋಕವು ಪರಲೋಕಗಳು ಅವುಗಳಿಗೆ ಸಾಧನಗಳು ಫಲಕೊಡುವ ಈಶ್ವರನು ಇಲ್ಲವೆಂದು ಹೇಳುವ ಬೌದ್ಧರಿಗೆ ನಾಸ್ತಿಕನಾಸ್ತಿಕ (ಮಹಾನಾಸ್ತಿಕ) ಎನ್ನಬೇಕು ಎಂತ ಹೇಳುತ್ತೀರಿ. ಅವರಂತೆ ನೀವು (ಅದ್ವೈತಿಗಳು) ಈಲೋಕವು ಇಲ್ಲ ಪರಲೋಕಗಳು ಇಲ್ಲ. ಅವುಗಳಿಗೆ ಸಾಧನವಿಲ್ಲ. ಆ ಫಲವನ್ನ ಕೊಡುವ (ದಾತೃನಾದ) ಈಶ್ವರನು ಇಲ್ಲ. ಎಂತ ಹೇಳುತ್ತಾನಾವು (ಅದ್ವೈತಿಗಳು) ಆಸ್ತಿಕ ಶಿರೋಮಣಿಗಳು ಎಂತ ಹೇಳಿಕೊಳ್ಳುತ್ತೀರಿ. ಇದು ಹೇಗೆ ಒಪ್ಪುತ್ತದೆ. ತಮಗಾದರೂ ಬೌದ್ಧರಂತೆ ನಾಸ್ತಿಕ ಶಿರೋಮಣಿಗಳು ಎಂಬುದೇ ಒಪ್ಪುವುದು.

ಪ್ರ. ವಾ. ಆಚಾರ್ಯರೆ, ನಂಮ ಮತವು ತಮಗೆ ಸರಿಯಾಗಿ ತಿಳಿದಂತೆ ತೋರುವದಿಲ್ಲ. ನಾವು ಜಗತ್ತು ಕಲ್ಪಿತವೆಂತ ಅಂದರೂನೂ, ವ್ಯಾವಹಾರಿಕ ಸತ್ಯವಾದದ್ದು ಯನ್ನುತ್ತೇವೆ. ಈ ಲೋಕವೂ, ಸ್ವರ್ಗಾದಿ ಪರಲೋಕಗಳೂ, ಅವುಗಳ ಸಾಧನಗಳೂ, ಅವಂನಕೊಡತಕ್ಕ (ದಾತೃನಾದ) ಈಶ್ವ

ರನ್ನೂ, ಬ್ರಾಹ್ಮಣವರ್ಣ ಮೊದಲಾದ ಮೇಲೇಹೇಳಿದ ಸಮಸ್ತ ಜಗತ್ತೂ ವ್ಯಾವಹಾರಿಕ ಸತ್ಯವಾದದ್ದು. ಬೌದ್ಧರಂತೆ ಅತ್ಯಂತ ಅಸತ್ಯವಾದದ್ದು ಯಂತ ಹೇಳುವದಿಲ್ಲಾದಕಾರಣ ನಾವು ಬೌದ್ಧರಂತೆ ನಾಸ್ತಿಕ ನಾಸ್ತಿಕರು (ನಾಸ್ತಿಕ ಶಿರೋಮಣಿಗಳು) ಹೇಗೆ ಆದೇವು! ತಾವು ನಮಗೆ ನಾಸ್ತಿಕ ಶಿರೋಮಣಿಗಳು ಎಂತ ಅಂದರೂ, ಭೇದಬುದ್ಧಿರಹಿತರಾದ ನನಗೇನೂ ಕೋಪವಿಲ್ಲ. ಆದರೆ ಕೋರ್ಟಿನಲ್ಲಿ ಮಾತನಾಡತಕ್ಕದ್ದು, ನೋಡಿ ಮಾತನಾಡಬೇಕು ಎಂಬ ಅಂಶವನ್ನ ಮನಸ್ಸಲ್ಲಿಟ್ಟು ಕೊಂಡಿರಬೇಕು.

ವಾದಿ. ಶಾಸ್ತ್ರಿಗಳೇ, ಲೌಕಿಕ ವಿಚಾರವಿರಲಿ (1) ವ್ಯಾವಹಾರಿಕ ಸತ್ಯತ್ವವನ್ನ ಜಗತ್ತಿಗೆ ಒಪ್ಪಿದರೂ! ನಾಸ್ತಿಕತ್ವವು ಹೋಗುವದಿಲ್ಲ. (2) ಅದ್ವೈತಿಗಳಂತೆ ಬೌದ್ಧರು ಜಗತ್ತಿಗೆ ವ್ಯಾವಹಾರಿಕಸತ್ಯವನ್ನ ಒಪ್ಪಿದ್ದಾರಾದ ಕಾರಣ ಬೌದ್ಧರು ಜಗತ್ತಿಗೆ ವ್ಯಾವಹಾರಿಕ ಸತ್ಯತ್ವವನ್ನ ಹೇಳಿಲ್ಲ ಯಂತ ಹೇಳಿದ್ದು ತಪ್ಪು.

ಪ್ರ. ವಾ. ಬೌದ್ಧರು ಜಗತ್ತಿಗೆ ವ್ಯಾವಹಾರಿಕಸತ್ಯತ್ವವನ್ನ ಒಪ್ಪಿದ್ದಾರೆ ಎಂಬುವುದಕ್ಕೆ ಆಧಾರವೇನು?

ವಾದಿ. "ದ್ವೇಸತ್ಯೇಸಮುಪಾಶ್ರಿತ್ಯ ಬುದ್ಧಾನಾಂ ಧರ್ಮದೇಶನಾ। ಲೋಕೇಸಾಂವೃತಸತ್ಯತ್ವಂ ಸತ್ಯಂಚ ಪರಮಾರ್ಥತಃ॥ ಎಂಬ ವಾಕ್ಯದಿಂದ ಬೌದ್ಧಮತದಲ್ಲಿ ವ್ಯಾವಹಾರಿಕ ಸತ್ಯ, ಪಾರಮಾರ್ಥಿಕ ಸತ್ಯವೆಂಬುದಾಗಿ ಎರಡು ಸತ್ಯಗಳುಂಟೆಂದು ಗೊತ್ತಾಗುತ್ತದೆ. ಮತ್ತು ಸಾಂವೃತಸತ್ಯವು= "ಅವಿದ್ಯಕಸತ್ಯವು = ವ್ಯಾವಹಾರಿಕಸತ್ಯವು" ಪಾರಮಾರ್ಥಿಕ ಸತ್ಯವು ಎಂದು, ಸತ್ಯವು ಎರಡು ಪ್ರಕಾರವಾದದ್ದು ಎಂದು ಬೌದ್ಧರು ಹೇಳಲು, "ಸತ್ಯಂಚೇತ್ ಸಂವೃತಿಃಕೇಯಂ" ಇತ್ಯಾದಿ§ಶ್ಲೋಕಗಳಿಂದ,ಸತ್ಯವಾದರೆ ಸಾಂವೃತ ಸತ್ಯ (ಸುಳ್ಳುಸತ್ಯ) ವ್ಯಾವಹಾರಿಕ ಸತ್ಯ ಎಂಬುವದು ಹೇಗೆ

---

§ ಸತ್ಯಂ ಚೇತ್ ಸಂವೃತಿಃ ಕೇಯಂ ಮೃಷಾಚೇತ್ಸ ತ್ಯತಾಕಥಂ| ಸತ್ಯತ್ವಂ ನಚಸಾಮಾನ್ಯಂ ಮೃಷಾರ್ಥಪರಮಾರ್ಥಯೋಃ | ತುಲ್ಯಾರ್ಥತ್ವೇ ಪಿತೆನ್ಯೆಷಾಂ ಮಿಥ್ಯಾಸಂವೃತಿಶಬ್ದಯೋಃ । ವಂಚನಾರ್ಥಮುಪನ್ಯಾಸಃ ಲಾಲಾವಕ್ತ್ರಾಸವಾದಿವತ್ | ನಾಸ್ತಿಕ್ಯ ಪರಿಹಾರಾರ್ಥಂ ಸಂವೃತಿಃ ಕಲ್ಪನೇತಿಚ ...... ತಸ್ಮಾದ್ಯನಾಸ್ತಿನಾಸ್ತ್ಯೇವ ಯದಸ್ತಿ ಪರಮಾರ್ಥತಃ| ತತ್ಸತ್ಯಮನ್ಯನ್ಮಿಥ್ಯೇತಿ ನಸತ್ಯದ್ವಯಕಲ್ಪನಾ ನಹಿಸ್ವಪ್ನಸುಖಾದ್ಯರ್ಥಂ ಧರ್ಮೇಕಶ್ಚಿತ್ಪ್ರವರ್ತತೇ.

ಕೊಡುತ್ತವೆ. "ಮೃಷಾ" ಸುಳ್ಳು ಆದರೆ ಸತ್ಯ ವೆಂಬುದು ಹೇಗೆ?
ಸುಳ್ಳಾದಪದಾರ್ಥದಲ್ಲಿ, ಸತ್ಯಪದಾರ್ಥದಲ್ಲಿ, ಸತ್ಯತ್ವವೆಂಬುವಧರ್ಮವೂ
ಇಲ್ಲ. (ಪಾರಮಾರ್ಥ (ಸತ್ಯ) ಪದಾರ್ಥಕ್ಕೆ, ಮತ್ತು ಸುಳ್ಳುಪದಾರ್ಥಕ್ಕೆ
ಸತ್ಯವೆಂಬ ಹೆಸರು ಇಲ್ಲ.) ಹೇಗೆ "ವಕ್ತ್ರಾಸವ" ಎಂದರೂ ಜೊಲ್ಲೇ,
ಲಾಲಾ ಎಂದರೂ ಜೊಲ್ಲೇ ಆದಾಗ್ಯೂ, ಜನರವಂಚನಾರ್ಥವಾಗಿ "ಲಾಲಾ"
"ವಕ್ತ್ರಾಸವ" ಎಂಬ ಬೇರೆಬೇರೇ ಪದವನ್ನು ಉಪಯೋಗಮಾಡುತ್ತಾ
ರೆಯೋ?, ಹಾಗೆಯೇ ಮಿಥ್ಯಾ ಸುಳ್ಳು ಸಂವೃತೀ ಸಾಂವೃತಸತ್ಯ
ವ್ಯಾವಹಾರಿಕ ಸತ್ಯ ಎಂಬ ಪದಗಳಿಗೆ ಒಂದೇ ಅರ್ಥವಿದ್ದಾಗ್ಯೂ,
ಆಸ್ತಿಕ ಜನರ ವಂಚನಾರ್ಥವಾಗಿ ಸುಳ್ಳೆಂದು ಹೇಳುವುದಕ್ಕಾಗಿಯೇ
ಮಿಥ್ಯಾ ಎಂದು ಹೇಳದೆ ಸಂವೃತಿ ಸಾಂವೃತಸತ್ಯ=ವ್ಯಾವಹಾರಿಕ
ಸತ್ಯ) ಎಂತ ಹೇಳುವದು. ವಸ್ತುತಃ ಯಾವುದು ಇಲ್ಲವೋ ಅದು ಇಲ್ಲವೇ
ಇಲ್ಲ. ಯಾವುದು ಉಂಟೋ ಅದು ಪಾರಮಾರ್ಥಿಕಸತ್ಯವಾದುದೇ
ಬೌದ್ಧರು ಸುಳ್ಳಾದ ಪದಾರ್ಥಕ್ಕೆ ವ್ಯಾವಹಾರಿಕ ಸತ್ಯ (ಸಂವೃತಿಸತ್ಯ)
ವೆಂದು ವಂಚನಾರ್ಥವಾಗಿ ಹೇಳುತ್ತಾರೆಂದು ಕುಮಾರಿಲಭಟ್ಟರು ಹೇಳಿ
ರೋಣದರಿಂದ, ಬೌದ್ಧರು ವ್ಯಾವಹಾರಿಕಸತ್ಯವೆಂಬುದನ್ನು ಒಪ್ಪುತ್ತಾ
ರೆಂದು ಸಿದ್ಧಿಸುತ್ತದೆ. ಹೆಚ್ಚು ಹೇಳಬೇಕಾದ್ದು ಏನಿದೆ. ಬೌದ್ಧರು
ಜಗತ್ತು ಸತ್ಯವಲ್ಲೆಂತ ಹೇಳಲು, ಅವರಮೇಲೇ "ಶೂನ್ಯವಾದಿಪಕ್ಷ
ಸ್ತು ಸರ್ವಪ್ರಮಾಣ ವಿಪ್ರತಿಷಿದ್ಧ ಇತಿ ತನ್ನಿರಾಕರಣಾಯನಾದರಃ
ಕ್ರಿಯತೇ" ಎಂಬ ವಾಕ್ಯದಿಂದ ಶಂಕರಾಚಾರ್ಯರು ಪ್ರಮಾಣಗಳು ಜಗ
ತ್ತಿಗೆ ಸತ್ಯತ್ವವನ್ನ ವಿಷಯೀಕರಿಸುತ್ತವೆ. ಜಗತ್ತು ಸತ್ಯವಲ್ಲವೆಂದು
ಹೇಳಿದರೆ ಪ್ರಮಾಣ ವಿರೋಧ ಬರುತ್ತದೆಂತ ಆಕ್ಷೇಪಿಸಲು
ಪ್ರಮಾಣಗಳು ಜಗತ್ತಿಗೆ ವ್ಯಾವಹಾರಿಕ ಸತ್ಯತ್ವವನ್ನು ವಿಷಯೀಕರಿ
ಸುತ್ತವೆ (ತಿಳಿಸುತ್ತವೆ.) ನಾವು (ಬೌದ್ಧರು) ಜಗತ್ತಿಗೆ ಪಾರಮಾರ್ಥಿಕ
ಸತ್ಯತ್ವವನ್ನು ನಿಷೇಧಮಾಡುತ್ತೇವೆ. ಹೀಗೆ ಭಿನ್ನವಿಷಯಕ ವಾದದ್ದರಿಂದ
ಪ್ರಮಾಣವಿರೋಧವು ಬರುವುದಿಲ್ಲೆಂತ ಬೌದ್ಧರು ಹೇಳಲು, ಅವರ
ಮತವನ್ನ ನಿರಾಕರಣಾರ್ಥವಾಗಿ ಹೊರಟ "ನಹ್ಯಯಂಸರ್ವಪ್ರಮಾಣಪ್ರಸಿ
ದ್ಧೋ ಲೋಕವ್ಯವಹಾರೋನ್ಯತ್ತತ್ವಾಮನಧಿಗಮ್ಯ ಶಕ್ಯತೇಽಪಹ್ನೋತು
ಮಪವಾದಾಭಾವೆ ಉತ್ಸರ್ಗ ಪ್ರಸಿದ್ಧೇಃ" ಎಂಬ ಭಾಷ್ಯವು ಅದಕ್ಕೆ ವ್ಯಾ
ಖ್ಯಾನರೂಪವಾದ ಪ್ರಮಾಣಾನಿಹಿಸ್ವಗೋಚರೇ ಪ್ರವರ್ತಮಾನಾನಿ ತತ್ವ
ಮಿದ ಮಿತ್ಯೇವ ಪ್ರವರ್ತಂತೆ ಅತಾರ್ಕಿಕತ್ವಂತು ತದ್ಗೋಚರಸ್ಯಾನ್ಯತೊ
ಭಾಧ ಕಾದವಗಂತವ್ಯಂನಪುನಃ ಸಾಂವ್ಯವಹಾರಿಕಂನಃ ಪ್ರಾಮಾಣ್ಯಂ

ನತುತಾತ್ತ್ವಿಕಮಿತ್ಯೇವ ಪ್ರವರ್ತಂತೆ" ಎಂಬ ಭಾಮತೀವಾಕ್ಯವು ಇವು ಗಳಿಂದಾ ಪ್ರಮಾಣಗಳು ತಂಮತಂಮ ವಿಷಯಗಳನ್ನ ತಾತ್ವಿಕ (ಪಾರ ಮಾರ್ಥಿಕ) ಸತ್ಯವೆಂತಲೇ ಗ್ರಹಿಸುತ್ತವೆ. ವ್ಯಾವಹಾರಿಕ ಸತ್ಯವೆಂತ ಗ್ರಹಿಸುವದಿಲ್ಲೆಂತ ಖಂಡನಮಾಡಿರೋಣದರಿಂದ ಬೌದ್ಧರು ಜಗತ್ತಿಗೆ ವ್ಯಾವಹಾರಿಕ ಸತ್ಯವನ್ನ ಒಪ್ಪುತ್ತಾರೆಂತ ಸಿದ್ಧವಾಗುತ್ತದೆ ಯಾದ್ದರಿಂದ ಬೌದ್ಧರು ಮತ್ತು ಅದ್ವೈತಿಗಳು ಜಗತ್ತಿಗೆ ವ್ಯಾವಹಾರಿಕ ಸತ್ಯತ್ವವನ್ನ ಹೇಳುತ್ತಾ ಇರಲು, ಬೌದ್ಧರು ನಾಸ್ತಿಕ ನಾಸ್ತಿಕರು ಯಾಕೆ? ಅವ ರಂತೆ ಬ್ರಾಹ್ಮಣವರ್ಣ ಮೊದಲಾದ ಜಗತ್ತಿಗೆ ವ್ಯಾವಹಾರಿಕಸತ್ಯತ್ವವನ್ನ ಹೇಳುವ ಅದ್ವೈತಿಗಳು ನಾಸ್ತಿಕ ನಾಸ್ತಿಕರು ಯಾಕೆ ಅಲ್ಲಾ? ಎಂಬುವು ದಕ್ಕೆ ಕಾರಣವು ಇಲ್ಲವಾದ್ದರಿಂದ ಅದ್ವೈತಿಗಳೂ ಕೂಡ ಬೌದ್ಧರಂತೆ ನಾಸ್ತಿಕನಾಸ್ತಿಕರೆಂಬುದಲ್ಲಿ ಸಂದೇಹವಿಲ್ಲ.

ಕೋರ್ಟ್. ಪರಲೋಕವಿಲ್ಲವೆಂಬುವರೆ ನಾಸ್ತಿಕರು. ಅದ್ವೈತಿಗಳು ಪರಲೋಕ ಮೊದಲಾದವು ವ್ಯಾವಹಾರಿಕ ಸತ್ಯವಾದದ್ದು ಎಂತ ಹೇಳುತ್ತಾರಾದ ಕಾರಣ ಅದ್ವೈತಿಗಳು ನಾಸ್ತಿಕರುಹೇಗೆ?

ವಾದಿ. ಧರ್ಮರಾಜರೇ "ವಂಚನಾರ್ಥಮುಪನ್ಯಾಸೊ ಲಾಲಾವಕ್ತ್ರಾಸವಾದಿ ವತ್ ॥ ನಾಸ್ತಿಕ್ಯಪರಿಹಾರಾರ್ಥಂ ಸಂವೃತಿಃ ಕಲ್ಪನೇತಿಚ" ಎಂತ ಬೌದ್ಧ ರನ್ನ ಖಂಡನಮಾಡುವಕಾಲಕ್ಕೆ, ಕುಮಾರಿಲಭಟ್ಟರು ಹೇಳಿದಂತೆ ಜಗತ್ತು ಸುಳ್ಳು ಎಂತ ಹೇಳಿದರೆ, ತಮಗೂ ನಾಸ್ತಿಕರೂ ಎಂತ ಜನರು ಅಂದಾರು, ತಮಗೆ (ಅದ್ವೈತಿಗಳಿಗೆ) ನಾಸ್ತಿಕರೆಂದು ಹೇಳ ಬಾರದೆಂದು ನಾಸ್ತಿಕ ವ್ಯವಹಾರ ಪರಿಹಾರಾರ್ಥವಾಗಿ ಸ್ವರ್ಗಾದಿ ಪರಲೋಕಗಳೂ, ಪುಣ್ಯಪಾಪ ಮುಂತಾದ್ದು ಸುಳ್ಳು ಎಂತ ಮನಸ್ಸಿನಲ್ಲಿ ದ್ದಾಗ್ಯೂ ಪರಲೋಕ ಮೊದಲಾದವುಗಳು ವ್ಯಾವಹಾರಿಕ ಸತ್ಯವಾದ ದ್ದೆಂದು ಹೇಳಿದ್ದಾರೆ ಹೊರ್ತು ವಸ್ತುತಃ ವಿಚಾರಮಾಡತಿರಲಿಕ್ಕಾಗಿ, ವ್ಯಾವಹಾರಿಕ ಸತ್ಯವೆಂಬರೆ ಶುಕ್ತಿರಜತದಂತೆ (ಶಿಂಪಿನಲ್ಲಿ ತೋರುವ ಬೆಳ್ಳಿಯಂತೆ)ಯೂ ಮೃಗತೃಷ್ಣಿಕಾ(ಬಿಸಿಲುಕುದುರೆ) ದಂತೆಯೂ, ರಜ್ಜು ಸರ್ಪ(ಹಗ್ಗವನ್ನುನೋಡಿ ಅದರಲ್ಲಿ ತೋರುವಸರ್ಪ) ದಂತೆಯೂಸುಳ್ಳು. ಮೂರುಕಾಲದಲ್ಲಿಯೂ ಇಲ್ಲದೇ ಇದ್ದದ್ದು ಎಂದು "ವ್ಯಾವಹಾರಿಕ ವಿಷಯಸ್ಯ ಶುಕ್ತಿರೂಪ್ಯಾದಿವತ್ಕದಾಚಿದ್ಬಾಧ್ಯತ್ವಾದ್ಬಾಧ್ಯವಿಷಯೇಚ ವ್ಯಾವಹಾರಿಕ ಪ್ರಮಾಣಮಿತಿ ವ್ಯವಹಾರಸ್ಯ ಅದ್ವೈತಪರಿಭಾಷಾ ಮಾತ್ರಸಿದ್ಧತ್ವಾತ್" ಇತ್ಯಾದಿ ವಾಕ್ಯಗಳಿಂದ ಅದ್ವೈತಿಗಳೇ ಹೇಳಿ

ಕೋಣದರಿಂದ, ಎಂದಿಗೂ ಇಲ್ಲಾ ಎಂದರೂ, ವ್ಯಾವಹಾರಿಕ ಸತ್ಯ ಎಂದರೂ ವಂದೇ ಅದ್ದರಿಂದ ಪರಲೋಕಾದಿಗಳು ಯಾವಕಾಲದಲ್ಲಿ ಯೂ ಇಲ್ಲವೆಂಬುವರು ಹೇಗೆ ನಾಸ್ತಿಕರೋ ಹಾಗೆಯೇ ವ್ಯಾವಹಾರಿಕ ಸತ್ಯವೆಂಬುವರು ಖಂಡಿತವಾಗಿಯೂ ನಾಸ್ತಿಕರೇ ಸರಿ.

ವಾ. ವ. ಧರ್ಮರಾಜ ಮಹಾರಾಜರೇ "ಬ್ರಹ್ಮಸತ್ಯಂಜಗನ್ಮಿಥ್ಯಾ ಜೀವೋ ಬ್ರಹ್ಮೈವನಾಪರಃ" ಎಂದು ಶಂಕರಾಚಾರ್ಯರು ಹೇಳಿದ ಮೂರುವಿಷಯ ಗಳಲ್ಲಿ, ಜಗತ್ತು ಮಿಥ್ಯ ಕಲ್ಪಿತವಾದದ್ದು ಎಂಬ ವಿಷಯದಲ್ಲಿಯು, ಮತ್ತು ಜಗತ್ತು ವ್ಯಾವಹಾರಿಕ ಸತ್ಯವೆಂಬ ವಿಷಯದಲ್ಲಿಯೂ, ವ್ಯಾವ ಹಾರಿಕ ಸತ್ಯವು, ಪಾರಮಾರ್ಥಿಕಸತ್ಯವು ಎಂದು ಸತ್ಯವು ಎರಡು ಪ್ರಕಾರ ಎಂಬುವ ವಿಷಯದಲ್ಲಿಯೂ, ಅದ್ವೈತಮತವು ಬೌದ್ಧಮತವು ಒಂದೇ ಆದದ್ದು ಎಂಬವಿಷಯವನ್ನ ಚಿತ್ತದಲ್ಲಿಡಬೇಕು ಎಂತ ಪ್ರಾರ್ಥನ.

ಕೋರ್ಟ್. ಆವಿಚಾರ ಈಗ ಯಾತಕ್ಕೆ? ವಿಚಾರಪೂರೈಸಿದಮೇಲೆ ನೋಡೋಣ. ಅದ್ವೈತಿಗಳು ಬ್ರಹ್ಮನು ತತ್ವವೆಂದು ಒಪ್ಪುತ್ತಾರೆ. ಕೆಲವರು ಬೌದ್ಧರು ಶೂನ್ಯವು ತತ್ವವೆಂದು ಒಪ್ಪುತ್ತಾರೆ. ಇನ್ನು ಕೆಲವು ಬೌದ್ಧರು ವಿಜ್ಞಾ ನವೇ ತತ್ವವೆಂದು ಒಪ್ಪುತ್ತಾರೆ. ಆ ಮುಖ್ಯವಾದ ವಿಷಯದಲ್ಲಿ ಅದ್ವೈತಿಗಳಿಗೂ, ಬೌದ್ಧರಗಳಿಗೂ ಭೇದ ಉಂಟಷ್ಟೆ? ಆವಿಷಯದಲ್ಲಿ ವಿಚಾರ ನಡೆಯಲಿ.

ವಾ. ವ. ಹಾಗೆಪ್ರಭೋ ಶಾಸ್ತ್ರಿಗಳೇ, ನೀವು (ಅದ್ವೈತಿಗಳು) ಒಪ್ಪುವ ಬ್ರಹ್ಮನು ಎಂಥವನು?

ಪ್ರ. ವಾ. ನಮ್ಮಬ್ರಹ್ಮನು ನಿರ್ವಿಶೇಷನು (ಸಕಲ ಧರ್ಮರಹಿತನು) ಸತ್ಯ ರೂಪನು. ಜ್ಞಾನರೂಪನು. ಆನಂದರೂಪನು. ಅಜ್ಞೇಯನು ಮತ್ತು ಅವಾಚ್ಯನು.

ಪ್ರ. ವ. ಆಚಾರ್ಯರೇ, ಬೌದ್ಧರು ಒಡಂಬಡುವ ಶೂನ್ಯವು ಎಂಥಾದ್ದು?

ವಾದಿ. ಬೌದ್ಧರಶೂನ್ಯವು ಎಂಥಾದ್ದು ಎಂಬುವದನ್ನು ನಾವೇನು ಹೇಳತಕ್ಕದ್ದು ಅದ್ವೈತಿಗಳ ಗ್ರಂಥದಿಂದಲೂ, ಬೌದ್ಧರ ಗ್ರಂಥದಿಂದಲೂ, ತಿಳಿದು ಬರು ತ್ತದೆ. ಶಾಸ್ತ್ರಿಗಳಿಗೆ ತಿಳಿಯದಿದ್ದಿದ್ದು ಏನು ಇದೆ.

ಪ್ರ. ಪ. ಕೋರ್ಟಿನಲ್ಲಿ ಎಷ್ಟುಕೇಳುತ್ತಾರೊ, ಅಷ್ಟನ್ನಹೇಳಿರಿ. ಯಾರಿಗೆ ತಿಳಿ ದಿದ್ದರೇನು, ತಿಳಿಯದಿದ್ದರೇನು.

ವಾದಿ. ಆಗಲಿ ಹೇಳುತ್ತೇನೆ. ಬೌದ್ಧರು ಹೇಳುವಶೂನ್ಯವು ನಿರ್ವಿಶೇಷವು

(ಸಕಲಧರ್ಮ ರಹಿತವಾದದ್ದು). ಸತ್ಯವಾದದ್ದು, ಜ್ಞಾನರೂಪವು, ಆನಂದರೂಪವು ಅಜ್ಞೇಯವು ಮತ್ತು ಅವಾಚ್ಯವು.

ವಾ. ಪ. ಶಾಸ್ತ್ರಿಗಳೇ. ಅದ್ವೈತಿಗಳು ಹೇಳುವ ಬ್ರಹ್ಮನೂ, ಬೌದ್ಧರು ಹೇಳುವ ಶೂನ್ಯವೂ, ಒಂದೇಸ್ವರೂಪ ಉಳ್ಳದ್ದು. ಆದ್ದರಿಂದ ಅದ್ವೈತಿಗಳ ಬ್ರಹ್ಮವೂ, ಬೌದ್ಧರಶೂನ್ಯವೂ ಒಂದೇ ಆಯಿತ್ತಷ್ಟೆ?

ಪ್ರ. ವಾ. ಮಾಧವದಾಸರೆ, ಶೂನ್ಯವು ನಿರ್ವಿಶೇಷವು, ಸತ್ಯವೂ, ಜ್ಞಾನಸ್ವರೂಪವೂ, ಆನಂದರೂಪವೂ, ಅಜ್ಞೇಯವೂ ಅವಾಚ್ಯವೂ ಎಂದು ಬೌದ್ಧರು ಒಪ್ಪುತ್ತಾರೆಂಬುವವಿಷಯದಲ್ಲಿ ಆಧಾರಕೊಡದೆ ನಾವು ಬ್ರಹ್ಮನು ಎಂಥವನೆಂದು ಹೇಳಿದ್ದೇವೆಯೋ ಅಂಥಾದ್ದು ಶೂನ್ಯವು ಎಂತ ಹೇಳೋಣಮಾತ್ರದಿಂದ ಶೂನ್ಯವೂ ಬ್ರಹ್ಮನೂ ಒಂದೇ ಆಗುವದೋ? ಆಧಾರತೋರಿಸದೇ ನೀವು ಹೇಗೆ ವಕೀಲರೋ ನಾನೂ ಹಾಗೆಯೇ ವಕೀಲನು ಎಂತ ಹೇಳಿದಾಕ್ಷಣವೇ, ನಾನೂ ವಕೀಲಾಗುವೆನೋ?

ವಾ. ಪ. ಆಚಾರ್ಯರೆ, ಶೂನ್ಯವು ನಿರ್ವಿಶೇಷವೆಂಬುವ ವಿಷಯದಲ್ಲಿ ಆಧಾರವನ್ನ ಹೇಳಿರಿ.

ವಾದಿ. ಶಾಸ್ತ್ರಿಗಳೇ ಈಗ್ರಂಥವನ್ನು ನೋಡಿದ್ದೀರೋ?

ಪ್ರ. ವಾ. ನೋಡಿದ್ದೇವೆ. ಇದು ನಮ್ಮ ಶಂಕರಾಚಾರ್ಯರು ರಚಿಸಿರುವ "ವಿಷ್ಣು ಸಹಸ್ರನಾಮದ ಭಾಷ್ಯ" ಗ್ರಂಥವು.

ವಾದಿ. ಈವಾಕ್ಯವನ್ನು ಓದಿ ಇದರ ಅರ್ಥವನ್ನು ಹೇಳಿರಿ.

ಪ್ರ. ವಾ. "ನಿರ್ವಿಶೇಷತ್ವಾಚ್ಛೂನ್ಯವಚ್ಛೂನ್ಯಃ" ಶೂನ್ಯದಂತೆ ಬ್ರಹ್ಮನುನಿರ್ವಿಶೇಷನಾದ ಕಾರಣ ಶೂನ್ಯ ಎಂತ ಕರೆಯಿಸಿ ಕೊಳ್ಳಲ್ಪಡುತ್ತಾನೆಂದು ಅರ್ಥವು.

ವಾದಿ. ಇದರಿಂದ ಬ್ರಹ್ಮನಂತೆ ಶೂನ್ಯವು, ನಿರ್ವಿಶೇಷವಾದದ್ದು (ಸಕಲಧರ್ಮ ರಹಿತರಾದದ್ದು) ಎಂತ ಸಿದ್ಧಿಸಿತೋ ಇಲ್ಲವೋ?

ಪ್ರ. ವಾ. ಶೂನ್ಯವು ನಿರ್ವಿಶೇಷವೆಂದು ಸಿದ್ಧಿಸಲಿ. ಸತ್ಯವಾದದ್ದು ಎಂಬ ವಿಷಯದಲ್ಲಿ ಆಧಾರವನ್ನು ಹೇಳಿರಿ?

ವಾದಿ. "ದ್ವೆಸತ್ಯೆಸಮುಪಾಶ್ರಿತ್ಯ ಬುದ್ಧಾನಾಂ ಧರ್ಮದೇಶನಾ|
ಲೋಕೆಸಾಂವೃತಸತ್ಯಂಚ ಸತ್ಯಂಚ ಪರಮಾರ್ಥಕಃ||"

ಎಂಬ ಗ್ರಂಥದಿಂದ ಜಗತ್ತು ವ್ಯಾವಹಾರಿಕ (ಸಾಂವೃತ) ಸತ್ಯವು. ಶೂನ್ಯವು ಪಾರಮಾರ್ಥಿಕಸತ್ಯವು ಎಂತ ಸಿದ್ಧಿಸುತ್ತದೆ. ಮತ್ತು "ಶೂನ್ಯವಾದಿನಾಂಶೂನ್ಯತಾಯಾ ಅಪಿಸತ್ಯತ್ವಾತ್" ಎಂಬ ಭಾಮತಿವಾಕ್ಯದಿಂದ ಶೂನ್ಯವಾದಿಗಳ ಶೂನ್ಯವು ಸತ್ಯವಾದದ್ದು ಎಂತ ಸಿದ್ಧಿಸುತ್ತದೆ.

ಪ್ರ. ವಾ. ಶೂನ್ಯವು ಸತ್ಯವಾಗಲಿ. ನಿರ್ವಿಶೇಷವೂ ಆಗಲೀ ಜ್ಞಾನಾನಂದರೂಪವಾದದ್ದು ಎಂಬ ವಿಷಯದಲ್ಲಿ ಆಧಾರವೇನು?

ವಾದಿ. ತಂಮ ಅದ್ವೈತಗ್ರಂಥಗಳೇ ಆಧಾರಗಳು ಬ್ರಹ್ಮನಿಗೆ "ಸತ್ಯಂಜ್ಞಾನಮಾನಂದಂ ಬ್ರಹ್ಮ" ಎಂತ ಸತ್ಯಸ್ವರೂಪತ್ವಜ್ಞಾನಸ್ವರೂಪತ್ವ ಆನಂದಸ್ವರೂಪತ್ವ ಇವುಗಳು ಲಕ್ಷಣವೆಂತ ಹೇಳಿ ಮೂರು ವಿಶೇಷಗಳಿಗೆ ಪ್ರಯೋಜನವನ್ನು ಹೇಳುವಕಾಲಕ್ಕೆ "ಶೂನ್ಯವಾದಿಭಿರಪಿ ಸತ್ವರಹಿತ ಜ್ಞಾನಾನಂದಾತ್ಮಕತ್ವಸ್ಯ ಬ್ರಹ್ಮಣೋಽನ್ಯತ್ರಾಂಗೀಕಾರಾತ್ ಮಿಲಿತಂ ವಿನಾ ನನಿರ್ವಿಚಿಕಿತ್ಸಾಬ್ರಹ್ಮಸಿದ್ಧಿಃ ಇತಿಮಿಲಿತಂಲಕ್ಷಣಂ" ಎಂಬ "ಅದ್ವೈತಸಿದ್ಧಿ" ವಾಕ್ಯದಿಂದ ತಥಾಜ್ಞಾನಾತ್ಮಕಾನಂದ ವತ್ವಂತಸ್ಮತೆ (ಶೂನ್ಯವಾದಿ ಮತೆ) ಬ್ರಹ್ಮಭಿನ್ನೇಪೀತಿ ತದ್ವಾರಣಾಯ ಸತ್ಯಮಿತಿ" ಎಂಬ ಗೌಡಬ್ರಹ್ಮಾನಂದೀಯ ವಾಕ್ಯದಿಂದಲೂ, ಬ್ರಹ್ಮನು ಜ್ಞಾನರೂಪನು ಆನಂದರೂಪನು ಎಂತಇಷ್ಟೇ ಲಕ್ಷಣವನ್ನ ಹೇಳಿದರೆ ಶೂನ್ಯವಾದಿಗಳು ಶೂನ್ಯಕ್ಕೂ ಜ್ಞಾನರೂಪತ್ವ ಆನಂದರೂಪತ್ವವನ್ನು ಹೇಳುತ್ತಾರೆ. ಆಶೂನ್ಯದಲ್ಲಿ ಈಬ್ರಹ್ಮಲಕ್ಷಣವು ಬಂದೀತು. ಬ್ರಹ್ಮಲಕ್ಷಣವು ಶೂನ್ಯದಲ್ಲಿ ಬರಬಾರದಕಾಗಣ ಸತ್ಯರೂಪತ್ವವನ್ನು ಬ್ರಹ್ಮಲಕ್ಷಣವೆಂತ ಹೇಳಬೇಕು ಎಂದು ಹೇಳಿರೋಣದರಿಂದ ಶೂನ್ಯವು ಜ್ಞಾನಾನಂದಾತ್ಮಕವಾದದ್ದು ಎಂತ ಸಿದ್ಧಿಸುತ್ತದೆ.

ಪ್ರ. ವಾ. ಶೂನ್ಯವು ಸತ್ಯರೂಪವಾದದ್ದು ಅಲ್ಲಾ ಎಂತ "ಅದ್ವೈತಿಸಿದಿ ಬ್ರಹ್ಮಾನಂದೀಗ್ರಂಥ" ದಲ್ಲಿ ಹೇಳಿದ್ದಾರಲ್ಲವೆ. ಶೂನ್ಯಕ್ಕೆ ಸತ್ಯರೂಪತ್ವವನ್ನ ಹೇಗೆ ಒಪ್ಪುತ್ತೀರಿ?

ವಾದಿ. ಭಾಮತ್ಯಾದಿ ಅದ್ವೈತಗ್ರಂಥಗಳಲ್ಲಿ ಶೂನ್ಯವು ಸತ್ಯರೂಪವಾದದ್ದು ಎಂತ ಹೇಳಿದ್ದಾರೆ. ಬೌದ್ಧಗ್ರಂಥಗಳಿಂದಲೂ, ಶೂನ್ಯವು ಸತ್ಯರೂಪವಾದದ್ದು ಎಂತ ಸಿದ್ಧಿರುವದರಿಂದ ಆ ಅಂಶದಲ್ಲಿ ಅದ್ವೈತ ಸಿದ್ಧಿಯು ಗ್ರಾಹ್ಯವಲ್ಲ. ಮತ್ತು ಆಕಾರ ಸಹಿತಾಬುದ್ಧಿಃ ಯೋಗಾಚಾರಸ್ಯ ಸಂಮತಾ॥ ಕೇವಲಾಂಸಂವಿದಂಸ್ವಸ್ಥಾಂ ಮನ್ಯಂತೇಮಧ್ಯಯಾಪುನಃ॥

"ಅದ್ವಯಜ್ಞಾನೈಕರೂಪಾಂ ಶೂನ್ಯತಾಂ ವಿಭಾವ್ಯ ಓಂ ಶೂನ್ಯತಾಜ್ಞಾನವಜ್ರಸ್ವಭಾವಾತ್ಮಕೋಽಹಂ ಇತಿ ಅಧಿತಿಷ್ಠೇತ್" "ಕೇವಲಾಂ ಅದ್ವಯವಿಜ್ಞಪ್ತಿಲಕ್ಷಣಾಂ ...... ಅನಂತಾಂ ಪಶ್ಯೇತ್" ಇತ್ಯಾದಿ ಬೌದ್ಧರ ವಾಕ್ಯಗಳಿಂದ ಶೂನ್ಯಕ್ಕೆ ಜ್ಞಾನರೂಪತ್ವವು; ಜ್ಞಾನಾತ್ಮಕಾನಂದರೂಪತ್ವವು ಸಿದ್ಧಿಸುತ್ತದೆ.

ಪ್ರ. ವಾ. ನಂಮ ಬ್ರಹ್ಮನಂತೆ ಶೂನ್ಯವೂ, ಅಜ್ಞೇಯವೂ ಅವಾಚ್ಯವೂ ಎಂತ ಹೇಗೆ ಸಿದ್ಧಿಸುತ್ತದೆ?

ವಾದಿ. "ನಿರ್ವಿಶೇಷಂ ಸ್ವಯಂಭಾತಂ ನಿರ್ಲೇಪಮಜರಾಮರಂ। ಶೂನ್ಯಂ ತತ್ವಮವಿಜ್ಞೇಯಂ ಮನೋವಾಚಾಮಗೋಚರಂ॥" ಇತ್ಯಾದಿ ಬೌದ್ಧರವಾಕ್ಯಗಳಿಂದ ಶೂನ್ಯವು ಅವಾಚ್ಯವು, ಅಜ್ಞೇಯವು ಎಂತಸಿದ್ಧಿಸುತ್ತದೆ.

ಆದುದರಿಂದ ಅದ್ವೈತಬ್ರಹ್ಮವು ಬೌದ್ಧರ ಶೂನ್ಯಕ್ಕಿಂತಾ ಬೇರೆಯಾದದ್ದು ಅಲ್ಲಾ ಎಂತ ಸಿದ್ಧಿಸುತ್ತದೆ. ಮತ್ತು ಘಟವು ಪಟದವಸೆಯಿಂದ ಭಿನ್ನವಾಗಬೇಕಾದರೆ (ಬೇರೆಯಾಗಬೇಕಾದರೆ) ಘಟದಲ್ಲಿಲ್ಲದೇ ಇದ್ದಧರ್ಮವು ಪಟದಲ್ಲಿರಬೇಕು. ಪಟದಲ್ಲಿಲ್ಲದಿದ್ದ ಧರ್ಮವು ಘಟದಲ್ಯಾದರು ಇರಬೇಕು. ಹೀಗೆ ಇದ್ದರೆನೇ ಘಟಪಟಗಳಿಗೆ ಭೇದವು ಸಿದ್ಧಿಸುತ್ತದೆ. ಶೂನ್ಯದಲ್ಲಿಲ್ಲದೇ ಇದ್ದಧರ್ಮವು ನಿರ್ವಿಶೇಷ (ಸಕಲಧರ್ಮರಹಿತ) ವಾದ ಅದ್ವೈತಿಗಳು ಹೇಳುವ ಬ್ರಹ್ಮನಲ್ಲಿ ಇಲ್ಲ. ಬ್ರಹ್ಮನಲ್ಲಿ ಇಲ್ಲದೇ ಇದ್ದ ಧರ್ಮಗಳು ನಿರ್ವಿಶೇಷವಾದ ಶೂನ್ಯದಲ್ಲಿ ಇಲ್ಲವಾದಪ್ರಯುಕ್ತ ಅದ್ವೈತಿಗಳು ಹೇಳುವ ಬ್ರಹ್ಮನಿಗೆ ಶೂನ್ಯದಿಂದ ಭೇದವು ಬರುವುದು ಹೇಗೆ. ಮತ್ತು ಅದ್ವೈತಿಗಳು "ನಾಮ ವಾ ರೂಪಂ ವಾ ಭೇದೋ ವಾ ಕಶ್ಚನ ವಿಶೇಷಃ ನ ಬ್ರಹ್ಮಣ್ಯಸ್ತಿ" ಎಂದು ಭೇದವನ್ನು ಕೂಡಾ ಬ್ರಹ್ಮನಲ್ಲಿ ಒಪ್ಪಿಲ್ಲ ಎಂದಮೇಲೆ ಅದ್ವೈತರು ಹೇಳುವಬ್ರಹ್ಮನು ಬೌದ್ಧರು ಹೇಳುವ ಶೂನ್ಯದ ವಸೆಯಿಂದ ಭಿನ್ನವಾದದ್ದು ಅಲ್ಲ (ಒಂದೇ) ಎಂದು ಸಿದ್ಧಿಸುತ್ತದೆ.

ವಾ. ವ. ಶಾಸ್ತ್ರಿಗಳೇ! ಈಗ್ರಂಥಗಳು ಯಾವುದೆಂಬುವುದು ನಿಮಗೆ ಗೊತ್ತುಂಟೋ

ಪ್ರ. ವಾ. ಗೊತ್ತುಂಟು. ಇದು ನಂಮ ಶಂಕರಾಚಾರ್ಯರ ಭಾಷ್ಯವು. ಎರಡನೇದು ಅದಕ್ಕೆ ವ್ಯಾಖ್ಯಾನವಾದ ಬ್ರಹ್ಮವಿದ್ಯಾಭರಣಗ್ರಂಥವು.

ವಾ. ವ. ಈಗ್ರಂಥಗಳು ನಿಮಗೆ ಮಾನ್ಯವಷ್ಟೆ?

ಪ್ರ. ವಾ. ಈಗ್ರಂಥಗಳು ನಮಗೆ ಪರಮ ಮಾನ್ಯವಾದವು.

ವಾ. ವ. ಈವಾಕ್ಯಗಳಿಗೆ ಅಭಿಪ್ರಾಯವನ್ನು ಹೇಳಿರಿ.

ಪ್ರ. ವಾ. ಸೂತ್ರಕಾರರು ಜ್ಞಾನ ಒಂದೇಸತ್ಯವು. ಆ ಜ್ಞಾನದಲ್ಲಿ ಜ್ಞಾತೃ ಜ್ಞೇಯ ಮೊದಲಾದ ಯಾವತ್ತೂ ಬಾಹ್ಯಪ್ರಪಂಚವು ಕಲ್ಪಿತವು ಎಂಬ ಯೋಗಾಚಾರ ಬೌದ್ಧಮತವನ್ನ ನಿರಾಕರಣ ಮಾಡೋದಕ್ಕೋಸ್ಕರ ಸೂತ್ರಗಳನ್ನ ಹ್ಯಾಗೆ ಮಾಡಿದ್ದಾರೋ, ಹಾಗೆ ಶೂನ್ಯವಂದೇ ತತ್ವವು, ಶೂನ್ಯದಲ್ಲಿ ಯಾವತ್ತು ಜಗತ್ತು ಕಲ್ಪಿತವು ಎಂಬ ಮಾಧ್ಯಮಿಕಬೌದ್ಧ ಮತವನ್ನ ಖಂಡನಮಾಡೋದಕ್ಕೋಸ್ಕರ ಸೂತ್ರವನ್ನ ಯಾಕೆ ಮಾಡಲಿಲ್ಲ ಎಂಬ ಶಂಕೆಯನ್ನು ನಿರಾಕರಣಮಾಡೋದಕ್ಕೋಸ್ಕರ *"ಶೂನ್ಯವಾದಿ ಪಕ್ಷಸ್ತು" ಎಂಬ ಮೊದಲಾದ ಭಾಷ್ಯವು ಹೊರಟಿತು. ಶೂನ್ಯವಾದಿ ಪಕ್ಷವು ಸರ್ವಪ್ರಮಾಣಗಳಿಂದ ನಿಷಿದ್ಧವಾದ್ದರಿಂದ ಅತ್ಯಂತ ಹೇಯವಾದದ್ದು. ಸಾಧನ ಮಾಡಲಿಕ್ಕೆ ಅಶಕ್ಯವಾದದ್ದು ಆದ್ದರಿಂದ ಆಮತವನ್ನ ನಿರಾಕರಣ ಮಾಡೋದಕ್ಕೋಸ್ಕರವಾಗಿ ಸೂತ್ರವನ್ನ ರಚನಮಾಡಲಿಲ್ಲೆಂದು ಹೇಳಲು, ಬ್ರಹ್ಮವಿದ್ಯಾಭರಣಕಾರರು (ಅದ್ವೈತಾನಂದರೆಂಬುವರು) ಬೌದ್ಧರಶೂನ್ಯವು ಭಾವರೂಪವಾದರೆ, ಶೂನ್ಯವೂ ಬ್ರಹ್ಮವೂ ಒಂದೇ ಆಗಿ ಶೂನ್ಯವಾದವು ಬ್ರಹ್ಮವಾದವು ಒಂದೇ ಆಯಿತು. ಶೂನ್ಯ, ಬ್ರಹ್ಮ ಎಂತ ಶಬ್ದಮಾತ್ರ ಬೇರೆ ಯಾಗುತ್ತದೆ. ಆದುದರಿಂದ ಶೂನ್ಯವಾದಿಮತವು ಸರ್ವಪ್ರಮಾಣ ವಿರುದ್ಧವು ಎಂದು ಶಂಕರಾಚಾರ್ಯರ ಅಭಿಪ್ರಾಯವಾದರೆ, ನಮ್ಮ ಅದ್ವೈತಮತವು ಸರ್ವಪ್ರಮಾಣ ವಿರುದ್ಧವಾಗುವುದು. ಕಾರಣ ಶಂಕರಾಚಾರ್ಯರ ಅಭಿಪ್ರಾಯವು ಹಾಗೆಂದು ಕಲ್ಪನಾ ಮಾಡಬಾರದು. ಶೂನ್ಯವು ಭಾವರೂಪ ಎಂತ ಬೌದ್ಧರು ಹೇಳಿದರೆ ಆ ಶೂನ್ಯವಾದವೂ, ಬ್ರಹ್ಮವಾದವೂ ಒಂದೇ ಆದುದರಿಂದ ಶೂನ್ಯವು ಭಾವರೂಪವೂ ಎಂದು ಹೇಳುವ ಶೂನ್ಯವಾದವು ಸ್ವೀಕಾರ ಮಾಡಲಿಕ್ಕೆ ಯೋಗ್ಯವಾದದ್ದು.

---

* ಶೂನ್ಯವಾದಿ ಪಕ್ಷಸ್ತು ಸರ್ವಪ್ರಮಾಣ ವಿಪ್ರತಿಷಿದ್ಧ ಇತಿ ತನ್ನಿರಾಕರಣಾಯನಾದರಃ ಕ್ರಿಯತೆ (ಬ್ರ. ಸೂ. ಶಂ. ಭಾ. ೨-೧-೨.) ಶೂನ್ಯಪದೇನ ಸರ್ವಪ್ರಪಂಚಾತೀತಂ ಭಾವರೂಪಂಕಿಂಚಿತ್ತತ್ವಂ ವಿವಕ್ಷಿತಂ ಉತಾಭಾವರೂಪಂ. ನಾದ್ಯಃ. ತಥಾಸತಿ ವಾಚೋಯುಕ್ತ್ಯಂತರೇಣ ಬ್ರಹ್ಮವಾದ ಏವಾಶ್ರಿತಃ. ಯದಿ ದ್ವಿತೀಯಃ ಪಕ್ಷಃ ತದಾ ಸರ್ವಪ್ರಮಾಣ ವಿರೋಧಃ. ಸರ್ವಪ್ರಮಾಣೈಃ ಪ್ರಪಂಚ ಉಪಲಭ್ಯಮಾನೆ ತದಭಾವ ಏವ ತತ್ವಮಿತಿ ನಿರೂಪಯಿತುಮಶಕ್ಯಮಿತಿ ದೂಷಣಸ್ಯ ಸ್ಫುಟತಯಾ ನ ತನ್ನಿರಾಕರಣಾಯ ಸೂತ್ರಕೃತಾ ಸೂತ್ರಾಣ್ಯಾರಚಿತಾನಿ.

ಬೌದ್ಧರು ಆಶೂನ್ಯವು ಪ್ರಪಂಚಾಭಾವರೂಪವಾದದ್ದು ಎಂದು ಹೇಳಿದರೆ ಪ್ರಪಂಚವು ಪ್ರಮಾಣದಿಂದ ಉಪಲಬ್ಧವಾಗುತ್ತಿರಲಿಕ್ಕೆ (ಕಾಣುತ್ತಿರಲಿಕ್ಕೆ) ಪ್ರಪಂಚವೇ ಇಲ್ಲ. ಪ್ರಪಂಚಾಭಾವವು ತತ್ವವು ಎಂತ ನಿರೂಪಣ ಮಾಡೋಣ (ಸಾಧನಮಾಡೋಣ) ಅಶಕ್ಯವು ಎಂಬ ದೂಷಣವು ಸ್ಪಷ್ಟವಾಗಿರೋಣದರಿಂದ ಸೂತ್ರಕಾರರು ಇಂಥಾ ದುರ್ಬಲವಾದ ಮತವನ್ನ ನಿರಾಕರಣ ಮಾಡುವದಕ್ಕೋಸ್ಕರ ಸೂತ್ರಗಳನ್ನು ಮಾಡಲಿಲ್ಲೆಂದು, ಶೂನ್ಯವು ಪ್ರಪಂಚಾಭಾವರೂಪವಾದದ್ದು ಎಂಬ ಶೂನ್ಯವಾದಿಗಳ ಮತವೇ ದುಷ್ಟವಾದದ್ದು. (ಪ್ರಮಾಣ ವಿರುದ್ಧವಾದದ್ದು) ಎಂದು ಎರಡನೇ ಶೂನ್ಯವಾದಿಗಳ ಮತವನ್ನು ನಿರಾಕರಣವಾಡೋಣವೇ ಶಂಕರಾಚಾರ್ಯರ ಭಾಷ್ಯಕ್ಕೆ ತಾತ್ಪರ್ಯವೆಂದು ಬ್ರಹ್ಮವಿದ್ಯಾಭರಣ ಗ್ರಂಥಕಾರರ ಅಭಿಪ್ರಾಯವು.

ವಾ. ಪ. ಗಂಗಾಧರಶಾಸ್ತ್ರಿಗಳೇ! ಬೌದ್ಧರಶೂನ್ಯವು ಭಾವರೂಪವಾದರೆ ನಿಂದು ಬ್ರಹವೂ ಆಶೂನ್ಯವೂ ಒಂದೆ. ಆಶೂನ್ಯವಾದಮತವು ನಿಮ್ಮಮತವು ಒಂದೆ ಎಂದು ಈಗ್ರಂಥಕಾರರ ಅಭಿಪ್ರಾಯವಷ್ಟೆ?

ಪ್ರ. ವಾ. ಶೂನ್ಯವುಭಾವರೂಪವಾದರೆ ಅದ್ವೈತಿಗಳ ಬ್ರಹ್ಮವಾದವೂ ಬೌದ್ಧರ ಶೂನ್ಯವಾದವೂ ಒಂದೇ ಎಂತ ಬ್ರಹ್ಮವಿದ್ಯಾಭರಣಕಾರರಾದ ಅದ್ವೈತಾನಂದರ ಅಭಿಪ್ರಾಯವು.

ವಾ. ವ. ಈಗ್ರಂಥಯಾವದು?

ಪ್ರ. ವಾ. ಇದು ನಂದು ಮಧುಸೂದನ ಸರಸ್ವತಿಗಳು ಮಾಡಿದ ಅದ್ವೈತ ಸಿದ್ಧಿ ಗ್ರಂಥವು.

ವಾ. ವ. § ಈ ವಾಕ್ಯದ ತಾತ್ಪರ್ಯವನ್ನ ಹೇಳಿರಿ.

ಪ್ರ. ವಾ. ಪ್ರಪಂಚಾಭಾವವು ಸತ್ಯವೋ ಮಿಥ್ಯೆಯೋ ಎಂದು ಪ್ರಶ್ನೆಮಾಡಿ, ಪ್ರಪಂಚಾಭಾವವು ಸತ್ಯವಾದರೆ, ಬ್ರಹ್ಮನೊಬ್ಬನುಸತ್ಯನು, ಪ್ರಪಂಚಾಭಾವವುವೊಂದುಸತ್ಯವು ಹೀಗೆ·ಎರಡುಸತ್ಯಪದಾರ್ಥ ಸಿದ್ಧಿಸೋಣದರಿಂದ ಅದ್ವೈತಹಾನಿಯು ಆಗುತ್ತದೆ. ಪ್ರಪಂಚಾಭಾವವು "ಮಿಥ್ಯಾ" ಸುಳ್ಳು ಆದರೆ ಪ್ರಪಂಚವು ಸತ್ಯವಾಗಬೇಕಾಗುತ್ತದೆಂದು ಆಕ್ಷೇಪಬರಲು ಪ್ರಪಂಚಾಭಾವವು ಸತ್ಯವಾದದ್ದು ಯೆಂಬ ಪಕ್ಷವನ್ನೇ ಸ್ವೀಕಾರಮಾಡುತ್ತೇವೆ.

---

§ ಪ್ರಪಂಚ ನಿಷೇಧಾಧಿಕರಣೀಭೂತ ಬ್ರಹ್ಮಾಭಿನ್ನತ್ವಾನ್ನಿಷೇಧಸ್ಯ ತಾತ್ವಿಕತ್ವೇಪಿ ನಾದ್ವೈತ ಹಾನಿಕರತ್ವಂ.

ಪ್ರಪಂಚಾಭಾವವು ಸತ್ಯವಾದರೆ ಅದ್ವೈತಹಾನಿಯು ಬರುವುದಿಲ್ಲ, ಆಪ್ರಪಂಚಾಭಾವವೂ ಬ್ರಹ್ಮಸ್ವರೂಪವೂ (ಬ್ರಹ್ಮನು ಪ್ರಪಂಚಾಭಾವ ರೂಪನು) ಎಂದು ಹೇಳುತ್ತೇವೆ ಎಂದುತಾತ್ಪರ್ಯವು.

ವಾ. ವ. ಶಾಸ್ತ್ರಿಗಳೇ ! ಈಗ್ರಂಥಯಾವುದು?

ಪ್ರ. ವಾ. ಇದು ಖಂಡನಖಂಡಖಾದ್ಯ ಎಂಬ ಗ್ರಂಥವು.

ವಾ. ವ. "ಭಾವೇಭಾವಾನತಿರಿಕ ಸ್ವೀಕಾರಾದೇವಾದ್ವೈತಾ ವ್ಯಾಘಾತಃ" ಎಂಬ ವಾಕ್ಯಕ್ಕೆ ಮತ್ತು ಇದರ ವ್ಯಾಖ್ಯಾನಭೂತವಾದ "ಅಸ್ಮಾಭಿರಪಿಬ್ರಹ್ಮಾತಿರಿಕ್ತಾಭಾವಾನಂಗೀಕಾರಾನ್ನಾದ್ವೈತವ್ಯಾಘಾತಃ" ಈವಾಕ್ಯಕ್ಕೂ ಅಭಿಪ್ರಾಯವನ್ನು ಹೇಳಿರಿ.

ಪ್ರ. ವಾ. ಅಭಾವವು ಬ್ರಹ್ಮಸ್ವರೂಪವೇ. ಬ್ರಹ್ಮಾತಿರಿಕ್ತವಾದ ಅಭಾವವನ್ನು ನಾವು ಸ್ವೀಕರಿಸುವುದಿಲ್ಲವಾದ್ದರಿಂದ ಅಭಾವವು ಒಂದು ಸತ್ಯವು, ಬ್ರಹ್ಮ ಒಂದು ಸತ್ಯವು ಎಂದು ಸಿದ್ಧಿಸಿ ಅದ್ವೈತವು ಕೆಟ್ಟು ಹೋಗುವದಿಲ್ಲ ಎಂತ ಅಭಿಪ್ರಾಯವು.

ವಾ. ವ. ಬ್ರಹ್ಮನು ಪ್ರಪಂಚಾಭಾವರೂಪನೆಂದು ಖಂಡನಖಂಡಖಾದ್ಯಕಾರರು ಮತ್ತು ಅದ್ವೈತಸಿದ್ಧಿಕಾರರು ಇವರ (ಅದ್ವೈತಿಗಳ) ತಾತ್ಪರ್ಯವಷ್ಟೆ?

ಪ್ರ ವಾ. ಹೌದು. ಬ್ರಹ್ಮನು ಪ್ರಪಂಚಾಭಾವರೂಪನೆಂದು ತಾತ್ಪರ್ಯ.

ವಾ. ವ. ಶೂನ್ಯವೂ ಭಾವರೂಪವೂ ಎಂತ ಹೇಳದೇ ಇರುವ ಬೌದ್ಧರು ಶೂನ್ಯವು ಯಾನರೂಪವು ಎಂದು ಅನ್ನುತ್ತಾರೆ.

ಪ್ರ. ವಾ. ಶೂನ್ಯವು ಪ್ರಪಂಚಾಭಾವರೂಪವೆನ್ನುತ್ತಾರೆ, ವಿಚಾರವೇನು, ಸ್ಪಷ್ಟವಾಗಿ ಬ್ರಹ್ಮವಿದ್ಯಾಭರಣದಲ್ಲಿ "ಸರ್ವಪ್ರಮಾಣೈಃ ಪ್ರಪಂಚ ಉಪಲಭ್ಯಮಾನೇತದಭಾವ ಏವತತ್ವಂ" ಇತ್ಯಾದಿ ವಾಕ್ಯಗಳಿಂದ ಪ್ರಪಂಚಾಭಾವ ರೂಪವೇ ಶೂನ್ಯವು ಎಂಬ ಮತವನ್ನು ಇಟ್ಟುಕೊಂಡು ಖಂಡನಮಾಡಿದ್ದಾರೆ.

ವಾ. ವ. ಶೂನ್ಯಕ್ಕೂ ಬ್ರಹ್ಮನಿಗೂ ಇತರ ವಿಷಯಗಳಲ್ಲಿ ಸಾಮ್ಯವನ್ನು ಒಪ್ಪಿ ಭಾವರೂಪ ಅಭಾವರೂಪ ಎಂಬ ವಿಷಯದಲ್ಲಿ ಚರ್ಚೆಬಂದು ಶೂನ್ಯವು ಭಾವರೂಪವೆಂದು ಬೌದ್ಧರು ಹೇಳುವದಾದರೆ, ಆಶೂನ್ಯವು ಅದ್ವೈತರ ಬ್ರಹ್ಮವೆ ಎಂದು ಕಂಠತಃ ಅದ್ವೈತಿಗಳು ಹೇಳಿರುವರು. ಬೌದ್ಧರು ಶೂನ್ಯವು ಪ್ರಪಂಚಾಭಾವರೂಪವೆಂದು ಹೇಳಿದಾಗ್ಯೂ ಬ್ರಹ್ಮವು ಪ್ರಪಂಚಾಭಾವರೂಪನೆಂದು ಅದ್ವೈತರುಗಳೇ ಒಪ್ಪಿಗೊಂಡಿರೋಣವರಿಂದ

ಪ್ರಪಂಚಾಭಾವರೂಪವಾದ ಶೂನ್ಯಕ್ಕೂ ಪ್ರಪಂಚಾಭಾವರೂಪವಾದ ಬ್ರಹ್ಮನಿಗೂ ಭೇದವು ಯಾವ ಅಂಶದಲ್ಲಿ ಇಲ್ಲವೇ ಇರೋಣದರಿಂದ ಅದ್ವೈತಬ್ರಹ್ಮನೂ ಶೂನ್ಯವು ಒಂದೇ ಆಯಿತ್ತಷ್ಟೆ?

ಪ್ರ. ವಾ. (ಉತ್ತರವಿಲ್ಲ)

ವಾ. ಪ. ಪ್ಲೈಲಾರ್ಡ್ (ಧರ್ಮರಾಜಮಹಾರಾಜರೆ) ಅದ್ವೈತಮತದಲ್ಲಿ ಬ್ರಹ್ಮನು ವಂದು ತತ್ವವು. ಆಬ್ರಹ್ಮನಲ್ಲಿ ಬ್ರಾಹ್ಮಣಾದಿವರ್ಣ ಮೊದಲಾದ ಯಾವತ್ತು ಜಗತ್ತು ಕಲ್ಪಿತವೆಂದು ಹೇಳಲ್ಪಡುತ್ತದೆ. ಬೌದ್ಧಮತದಲ್ಲಿ ಶೂನ್ಯವುವಂದು ತತ್ವವು. ಆಶೂನ್ಯದಲ್ಲಿ ಯಾವತ್ತುಜಗತ್ತು ಕಲ್ಪಿತವೆಂದು ಹೇಳಲ್ಪಡುತ್ತದೆ. ಶೂನ್ಯವು ನಿರ್ವಿಶೇಷವು (ಸಕಲಧರ್ಮರಹಿತವು) ಸತ್ಯಜ್ಞಾನಾನಂದ ಸ್ವರೂಪವು, ಅಜ್ಞೇಯವು ಅವಾಚ್ಯವು. ಅದ್ವೈತಿಗಳ ಬ್ರಹ್ಮವೂಕೂಡ ನಿರ್ವಿಶೇಷವು (ಸಕಲಧರ್ಮರಹಿತವು) ಸತ್ಯಜ್ಞಾನಾನಂದಸ್ವರೂಪವು, ಅಜ್ಞೇಯವು, ಅವಾಚ್ಯವು. ಶೂನ್ಯವು ಭಾವರೂಪವಾದರಿಂತಲೂ ಅದ್ವೈತಿಗಳೇ ತಮ್ಮ ಬಾಯಿಂದ ಭಾವರೂಪ ಶೂನ್ಯವಾದವು ಬ್ರಹ್ಮವಾದವು ಒಂದೆ ಎಂದು ವಪ್ಪಿದ್ದಾರೆ. ಶೂನ್ಯವು ಪ್ರಪಂಚಾಭಾವರೂಪವಾದರೂ ಅದ್ವೈತಿಗಳೂಕೂಡ ಬ್ರಹ್ಮನು ಪ್ರಪಂಚಾಭಾವರೂಪನು ಎಂದು ಹೇಳಿರೋಣದರಿಂದ ಅದ್ವೈತಿಗಳ ಬ್ರಹ್ಮನಿಗೂ ಬೌದ್ಧರ ಶೂನ್ಯಕ್ಕೂ ಯಾವಭೇದವೂ ಇಲ್ಲ. ಜಗತ್ತು ಕಲ್ಪಿತವಾದದ್ದು ಎಂಬುವದಂತೂ ಅದ್ವೈತಿಗಳು ಬೌದ್ಧರು ಒಪ್ಪುತ್ತಾರೆ. ಜಗತ್ತು ವ್ಯಾವಹಾರಿಕ ಸತ್ಯವೆಂತಲೂ ಇಬ್ಬರೂ ಒಪ್ಪುತ್ತಾರೆ. ಅಂದಮೇಲೆ ಯಾವ ವಿಷಯದಲ್ಲಿ ಬೌದ್ಧಮತಕ್ಕೂ ಅದ್ವೈತಮತಕ್ಕೂ ಭೇದ ಉಂಟು ಎಂಬುವುದನ್ನು ತಿಳಿಸಲಿಕ್ಕೆ ಮಿಸ್ಟರ್. ಹರಿಹರಶರ್ಮರಿಗೆ ಅಪ್ಪಣೆ ಆಗಬೇಕು.

ಕೋರ್ಟ್. ಮಿಸ್ಟರ್ ಹರಿಹರಶರ್ಮರೆ ಬೌದ್ಧಮತಕ್ಕೂ ಅದ್ವೈತಮತಕ್ಕೂ ಯಾವಯಾವ ವಿಷಯದಲ್ಲಿ ಭೇಧ ಉಂಟೆಂಬುವದನ್ನ ತಿಳಿಸಬೇಕು ಎಂತ ನಿಮ್ಮ ಕಕ್ಷಿಗಾರರಾದ ಗಂಗಾಧರ ಶಾಸ್ತ್ರಿಗಳಿಗೆ ಹೇಳಿರಿ.

ಪ್ರ. ವ. ಹಾಗೆ ಮಹಾಪ್ರಭುಗಳೆ.

ಪ್ರ. ವ. ಗಂಗಾಧರಶಾಸ್ತ್ರಿಗಳೇ ಅದ್ವೈತಮತಕ್ಕೂ ಬೌದ್ಧಮತಕ್ಕೂ ಯಾವ ಯಾವ ವಿಷಯದಲ್ಲಿ ಭೇದಉಂಟು ಹೇಳಿರಿ.

ಪ್ರ. ವಾ. ಅನೇಕವಿಷಯಗಳಲ್ಲಿ ಭೇದಉಂಟು.

ಪ್ರ. ವ. ಒಂದೊಂದು ವಿಷಯದಲ್ಲಿ ಹೇಳಿರಿ.

ಪ್ರ. ವಾ. ಅದ್ವೈತಿಗಳು ವೇದವನ್ನಪ್ರಮಾಣವೆಂದು ಒಪ್ಪುತ್ತಾರೆ. ವೇದೋದಿತ ಯಜ್ಞಾದಿಗಳನ್ನು ಸ್ವರ್ಗಾದಿ ಫಲೋದ್ದೇಶ್ಯವಾಗಿ ಮಾಡುತ್ತಾರೆ. ಬೌದ್ಧರು ವೇದವನ್ನು ಪ್ರಮಾಣವೆಂದು ಒಪ್ಪುವುದಿಲ್ಲ. ವೇದೋದಿತವಾದ ಯಜ್ಞಾದಿಗಳನ್ನು ಸ್ವರ್ಗೋದ್ದೇಶವಾಗಿ ಮಾಡುವದಿಲ್ಲ. ಇವು ಬೌದ್ಧರಿಗೂ ಅದ್ವೈತಿಗಳಿಗೂ ಭೇದಕವಾದ (ವಿರುದ್ಧವಾದ) ಧರ್ಮಗಳು.

ವಾದಿ. ಈಗ್ರಂಥವು ಯಾವುದು?

ಪ್ರ. ವಾ. ನಮ್ಮಶಂಕರ ಭಗತ್ಪಾದರ ಬೃಹದಾರಣ್ಯಕ ಭಾಷ್ಯವು ಅದಕ್ಕೆ ವ್ಯಾಖ್ಯಾನವಾದ ಆನಂದಗಿರಿ ಟೀಕೆಯು.

ವಾದಿ. ♦ ಈವಾಕ್ಯಗಳ ಅಭಿಪ್ರಾಯವನ್ನು ಹೇಳಿರಿ.

ಪ್ರ. ವಾ. ಬೌದ್ಧರ ಶಿಷ್ಯರಗಳು ದ್ವೈತಪ್ರಪಂಚವು (ಸ್ವರ್ಗಾದಿಲೋಕಗಳು) ಮಿಥ್ಯಾ (ಸುಳ್ಳು) ಎಂತ ತಿಳಿದು ಕೊಂಡಾಗ್ಯೂ ಹೆಗೆ "ಸ್ವರ್ಗಕಾಮಶ್ಚೈತ್ರ್ಯಂ ವಂಪೆತ" ಎಂಬ ವೊದಲಾದ ಪರಲೋಕ ಮುಂತಾದ್ದನ್ನು ಹೇಳುವ ತಮ್ಮಶಾಸ್ತ್ರಕ್ಕೆ ಪ್ರಾಮಾಣ್ಯವನ್ನು ಗ್ರಹಣಮಾಡಿಕೊತಾರೆಯೊ ಹಾಗೆಯೆ ಅಗ್ನಿಹೋತ್ರಾದಿ ಶಾಸ್ತ್ರಗಳಿಗ್ಯೂ ಪ್ರಾಮಾಣ್ಯವು ಕೊಡುತ್ತದೆ ಎಂದು ಅಭಿಪ್ರಾಯವು.

ವಾದಿ. ಈವಾಕ್ಯಗಳಿಂದಾ ಬೌದ್ಧರು ಅದ್ವೈತಿಗಳಂತೆ ಸ್ವರ್ಗ ಮೊದಲಾದ ಪರಲೋಕಗಳನ್ನು ಒಪ್ಪುತ್ತಾರೆ ಮತ್ತು ಸ್ವರ್ಗಲೋಕದಪ್ರಾಪ್ತಿ ಯಾಗುವದಗೋಸ್ಕರ ಸಾಧನಗಳಂನು ಮಾಡುತ್ತಾರೆ ಎಂತ ಸಿದ್ಧಿಸುತ್ತದೆಯೊ ಇಲ್ಲವೊ?

ಪ್ರ. ವಾ. ಸ್ವರ್ಗ ವೊದಲಾದ ಲೋಕಗಳಂನು ಒಪ್ಪುತ್ತಾರೆ. ಅದರ ಪ್ರಾಪ್ತಿಗೋಸ್ಕರವಾಗಿ ಪುಣ್ಯಕರ್ಮವನ್ನು ಮಾಡುತ್ತಾರೆಂದು ಸಿದ್ಧಿಸುತ್ತದೆ.

---

♦ ಶಾಸ್ತ್ರಸ್ಯ ಪ್ರಾಮಾಣ್ಯಂ ನಗೃಹ್ಣೀಯುಃ (ಬೃ. ಶಾಂ. ಭಾಷ್ಯ ೫।೧) ಕಿಂಚ ನ ದ್ವೈತವೈತಥ್ಯಂ ಶಾಸ್ತ್ರಪ್ರಾಮಾಣ್ಯ ವಿಘಾತಕಂ ಯತೋ ಬೌದ್ಧಾದಿಭಿಃ ಶ್ರೇಯಸೆ ಪ್ರಸ್ಥಾಪಿತಾಃ ಸ್ವಶಿಷ್ಯಾಃ ದ್ವೈತಮಿಥ್ಯಾತ್ವಾವಗಮೇಽಪಿ ಸ್ವರ್ಗಕಾಮಶ್ಚೈತ್ಯಂ ವಂದೆತೆತ್ಯಾದಿ ಶಾಸ್ತ್ರಸ್ಯಪ್ರಾಮಾಣ್ಯಂ ಗೃಹ್ಣಂತಿತಥಾ ಅಗ್ನಿಹೋತ್ರಾದಿ ಶಾಸ್ತ್ರಸ್ಯಾಪಿ ಪ್ರಾಮಾಣ್ಯಂಭವಿಷ್ಯತಿ ಸಾಧನತ್ವಶಕ್ತ್ಯನಪಹಾರಾದಿತ್ಯಾಹೇತಿ॥

ವಾದಿ. ಅದ್ವೈತಿಗಳಂತೆ ಬೌದ್ಧರು ಸ್ವರ್ಗೋದ್ದೇಶ್ಯಕವಾಗಿ ಪ್ರತ್ಯೇಕವಾಗಿ ಯಾಗಗಳನ್ನು ಮಾಡುವದಿಲ್ಲಾ ಎಂತ ಭೇದವನ್ನು ಹೇಳಿದ್ದು ಹೇಗೆ ಕೂಡುತ್ತದೆ.

ಪ್ರ ವಾ. (ಉತ್ತರವಿಲ್ಲ)

ವಾದಿ. ಶಾಸ್ತ್ರಿಗಳೇ ವೇದವು ಪ್ರಮಾಣವೆಂದರೆ ಅರ್ಥವೇನು ?

ಪ್ರ ವಾ. ಆಚಾರ್ಯರೆ, ಇದೇನು ದೊಡ್ಡ ವಿಷಯವೆಂದು ಕೇಳುತ್ತೀರಿ.

ವಾದಿ. ಶಾಸ್ತ್ರಿಗಳೇ ಸಣ್ಣದಾಗಲೀ ದೊಡ್ಡದಾಗಲೀ ಹೇಳಿರೇನು.

ಪ್ರ. ವಾ. ಪ್ರಮಾಣಶಬ್ದದಲ್ಲಿ ಪ್ರ, ಮಾ, ಲ್ಯುಟ್ ಎಂತ ಮೂರು ಭಾಗಗಳುಂಟು ಪ್ರ ಎಂದರೆ ಸತ್ಯವಾದವಸ್ತುವನ್ನು ತಿಳಿಸುಕೊಡುವ ಮಾ ಎಂದರೆ ಜ್ಞಾನವು ಅದನ್ನು ಲ್ಯುಟ್ ಎಂದರೆ ಹುಟ್ಟಿಸುವುದೆಂದು ಅರ್ಥವಿರೋಣದರಿಂದ, ವೇದವು ಪ್ರಮಾಣವೆಂದರೆ ಸತ್ಯವಾದವಸ್ತುವನ್ನು ತಿಳಿಸುವ (ವಿಷಯೀಕರಿಸುವ) ಜ್ಞಾನವನ್ನು ಹುಟ್ಟಿಸುವದು (ವೇದದಿಂದ ಹುಟ್ಟಿದ ಜ್ಞಾನದಿಂದ ತಿಳಿದು ಬರುವ ವಸ್ತುವು ಸತ್ಯವಾದದ್ದು ಎಂದು ಅರ್ಥವು.)

ವಾದಿ. ಶಾಸ್ತ್ರಿಗಳೇ, ಈಗ್ರಂಥವು ಯಾವುದು? ಯಾರು ಮಾಡಿದ್ದು?

ಪ್ರ. ವಾ. ನಮ್ಮ ಅಪ್ಪಯ್ಯದೀಕ್ಷಿತರು ಮಾಡಿದ ಸಿದ್ಧಾಂತಲೇಶಸಂಗ್ರಹ ನಾಮಕ ಗ್ರಂಥವು ಮತ್ತು ಅದರ ವ್ಯಾಖ್ಯಾನವು.

ವಾದಿ. ಈಗ್ರಂಥವು ಪ್ರಮಾಣ ಎಂತ ನೀವು (ಅದ್ವೈತಿಗಳು) ಒಪ್ಪುತ್ತೀರೋ ಇಲ್ಲವೋ?

ಪ್ರ. ವಾ. ಅಪ್ಪಯ್ಯದೀಕ್ಷಿತರು ದೊಡ್ಡವರು. ಅವರ ಗ್ರಂಥವನ್ನು ಪ್ರಮಾಣವೆಂತ ಒಪ್ಪುತ್ತೇವೆ. ಅವರಾದರೂ ತಮ್ಮ ಸ್ವಂತ ಅಭಿಪ್ರಾಯವನ್ನು ಹೇಳಿಲ್ಲ. ಪ್ರಾಚೀನಾಚಾರ್ಯರ ಸಿದ್ಧಾಂತಗಳನ್ನು ಸಂಗ್ರಹಿಸಿ ಹೇಳಿದ್ದಾರೆ. ಅದಕ್ಕೇನೇ ಆಗ್ರಂಥಕ್ಕೆ "ಸಿದ್ಧಾಂತಲೇಶ ಸಂಗ್ರಹ" ಎಂತ ಹೆಸರು.

ವಾದಿ. ‡ ಈ ವಾಕ್ಯಗಳನ್ನೋದಿ ಇವುಗಳಿಗೆ ತಾತ್ಪರ್ಯವನ್ನ ಹೇಳಿರಿ.

ಪ್ರ. ವಾ. ಸ್ವಪ್ನದಲ್ಲಿ ಒಬ್ಬಾನೊಬ್ಬ ಮನುಷ್ಯನು ಒಂದುಕಾಲದಲ್ಲಿ "ಜ್ಯೋತಿಷ್ಟೋಮೇನ ಸ್ವರ್ಗ ಕಾಮೋಯಜೇತ" ಎಂಬ ಶ್ರುತಿಯನ್ನು ಕಲ್ಪನಾ ಮಾಡಿಕೊಂಡು ಆಶ್ರುತಿಯಿಂದ ಸಾಧನ ವಿಶೇಷವನ್ನು ತಿಳಿದುಕೊಂಡು; ಆಸಾಧನವನ್ನು ಮಾಡಿ ಸ್ವರ್ಗಾದಿಫಲವನ್ನು ಹೊಂದುವದು ಯಂಥಾದ್ದೋ, ಜಾಗ್ರತ್ಕಾಲದಲ್ಲಿ "ಜ್ಯೋತಿಷ್ಟೋಮೇನ" ಎಂಬ ಶ್ರುತಿಯನ್ನು ಕಲ್ಪನಾವಮಾಡಿಕೊಂಡು ಸಾಧನವನ್ನುಮಾಡಿ ಸ್ವರ್ಗಾದಿ ಫಲವನ್ನು ಹೊಂದುವದೂಕೂಡ ಅಂಥಾದ್ದೆ. ವಾಸ್ತವವಾಗಿ ವಿಚಾರಮಾಡುತ್ತಿರಲು ಹೇಗೆ ಶ್ರುತಿಯಿಂದ ತೊರುವ ಆಕಾಶ ಮೊದಲಾದ ಪದಾರ್ಥಗಳ ಸೃಷ್ಟಿಗಳು ಶಶವಿಷಾಣದಂತೆ (ಮೊಲದಕೋಡಿನಂತೆ) ಅಸತ್ಯವಾದದ್ದೋ ಹಾಗೆಯೇ ಶ್ರುತಯಿಂದತೋರುವ ಸ್ವರ್ಗಾದಿಫಲಗಳು, ಕಲ್ಪನಮಾಡತಕ್ಕವರು ಯಾರೂ ಇಲ್ಲವಾದ ಪ್ರಯುಕ್ತ ಅಸತ್ಯವಾದವು ಎಂದು ಅಭಿಪ್ರಾಯವು.

ವಾದಿ. ಶಾಸ್ತ್ರಿಗಳೇ ಈಗ್ರಂಥವು ಯಾವದು?

ಪ್ರ. ವಾ. ಅತ್ಯಂತಮಾನ್ಯವು.

ಪ್ರ. ವಾ. ನಮ್ಮ ಗೌಡಪಾದಾಚಾರ್ಯರು ಮಾಡಿದ ಮಾಂಡೂಕೋಪನಿಷತ್ಕಾರಿ

‡ ಜ್ಯೋತಿಷ್ಟೋಮಾದಿ ಶ್ರುತಿಬೋಧಿತಾನುಷ್ಠಾನಾತ್ ಫಲಸಿದ್ಧಿಃ ಸ್ವಾಪ್ನ ಶ್ರುತಿ ಬೋಧಿತಾನುಷ್ಠಾನ ಪ್ರಯುಕ್ತಫಲಸಂವಾದತುಲ್ಯಾ (ಸಿದ್ಧಾಂತಲೇಶ ಸಂಗ್ರಹ)

ಸ್ವಪ್ನೇಽಕಶ್ಚಿತ್ ಕದಾಚಿತ್ ಜ್ಯೋತಿಷ್ಟೋಮಾದಿಶ್ರುತಿಂ ಕಲ್ಪಯಿತ್ವಾತತ ಸಾಧನವಿಶೇಷಮುಪಲಭ್ಯ ತದನುಷ್ಠಾನಾತ್ ಫಲಂ ಲಭತೆ। ತತ್ತುಲ್ಯಾ ಜಾಗರಣೇಪಿ ಸ್ವರ್ಗಾದಿ ಫಲಲಂಭನಮಿತ್ಯರ್ಥಃ

ವಸ್ತುತ ಸ್ತು ಶ್ರುತಿಮಾತ್ರಪ್ರತೀತ ವಿಯದಾದಿಸರ್ಗ ತತ್ಕ್ರಮಾದೇರಿವ ಶ್ರುತಿಮಾತ್ರಪ್ರತೀತ ಸ್ವರ್ಗಾದಿಫಲಸ್ಯಾಪ್ಯಸತ್ವಮೇವಾಭಿಪ್ರೇತಂ ಕಲ್ಪತಾಭಾವಸ್ಯ ತುಲ್ಯತ್ವಾದಿತಿಬೋಧ್ಯಂ ......

ಸ್ವಪ್ನಸ್ಯಾದಿಶ್ರುತಿ ಪ್ರತಿಪಾದ್ಯಸ್ಯ ವಿಯದಾದಿಸೃಷ್ಟಿತತ್ಕ್ರಮಾದೇಃ ಶಶಶೃಂಗಾಯಮಾಣತಯಾ ಶ್ರುತೇರಾಲಂಬನಾ ಭಾವಾದ ಪ್ರಾಮಾಣ್ಯಂ ಸ್ಯಾದಿತಿ (ಸಿ. ಲೆ. ಸಂ. ವ್ಯಾಖ್ಯಾ)

ಕೆಯು ಮತ್ತು ಶಂಕರಾಚಾರ್ಯರು ಮಾಡಿದವ್ಯಾಖ್ಯಾನವು (ಭಾಷ್ಯವು).

ವಾದಿ. ಈಗ್ರಂಥಗಳು ನಿಮಗೆ ಮಾನ್ಯವಷ್ಟೇ?

ಪ್ರ. ವಾ. ಅತ್ಯಂತ ಮಾನ್ಯವು.

ವಾದಿ. * ಈಶ್ಲೋಕಕ್ಕೆ ಮತ್ತು ಶಂಕರಾಚಾರ್ಯರು ಮಾಡಿದ ವ್ಯಾಖ್ಯಾನಕ್ಕೆ ಅಭಿಪ್ರಾಯವನ್ನು ಹೇಳಿರಿ.

ಪ್ರ. ವಾ. ಸ್ವಪ್ನಪದಾರ್ಥವು ಹೇಗೆ ಅಸತ್=ಸುಳ್ಳೋ, ಮಾಯಾಕಲ್ಪಿತವಾದ ಪದಾರ್ಥಗಳು ಹೇಗೆ ಅಸತ್=ಸುಳ್ಳೋ, ಮನೆ, ಅಂಗಡಿ, ಜನರು ಸಹಿತವಾದ ಗಂಧರ್ವನಗರವು ಹೇಗೆ ಅಸತ್=ಸುಳ್ಳೋ, ಸತ್ಯದಂತೆ ಕಾಣಿಸುತ್ತದೆಯೋ, ಹಾಗೆಯೇ ಈಯಾವತ್ತೂ ಜಗತ್ತು ಅಸತ್=ಸುಳ್ಳುಆದದ್ದು. ಜಗತ್ತು ಸುಳ್ಳು ಆದ್ದರಿಂದ, ಉತ್ಪತ್ತಿ ಇಲ್ಲ, ನಾಶವಿಲ್ಲ, ಸಂಸಾರಿಆದ ಜೀವನಿಲ್ಲ, ಮೋಕ್ಷಸಾಧನಮಾಡತಕ್ಕ ಜೀವನಿಲ್ಲ. ಮೋಕ್ಷವನ್ನು ಇಚ್ಛೆಮಾಡುವ ಪುರುಷನಿಲ್ಲ. ಮುಕ್ತನಾದ ಮನುಷ್ಯನಿಲ್ಲ, ಹೀಗೆ ಎಲ್ಲಾ ಜಗತ್ತೂ ಶಶವಿಷಾಣ, ಗಂಧರ್ವನಗರ ಮೊದಲಾದ ಪದಾರ್ಥಗಳಂತೆ ಅಸತ್ಯವೆಂದು ತಾತ್ಪರ್ಯವು.

ವಾದಿ. ಯಥಾಮಾಯಾಯಥಾಸ್ವಪ್ನೋ ಗಂಧರ್ವನಗರಂಯಥಾ। ತಥೋತ್ಪಾದಸ್ತಥಾಸ್ಥಾನಂ ತಥಾಭಂಗ ಉದಾಹೃತಃ ॥ ಈಶ್ಲೋಕವು ಯಾವ ಗ್ರಂಥದ್ದು?

---

* ಸ್ವಪ್ನಮಾಯೇಯಥಾದೃಷ್ಟೇ ಗಂಧರ್ವನಗರಂಯಥಾ॥ ತಥಾ ವಿಶ್ವಮಿದಂ ದೃಷ್ಟಂ ವೇದಾಂತೇಷು ವಿಚಕ್ಷಣೈಃ ॥ ೩೧ ॥ ನನಿರೋಧೋನಚೋತ್ಪತ್ತಿಃ ನಬದ್ಧೋನಚ ಸಾಧಕಃ॥ ನಮುಮುಕ್ಷುರ್ನವೈಮುಕ್ತ ಇತ್ಯೇಷಾ ಪರಮಾರ್ಥತಾ ॥ ೩೨ ॥ ಸ್ವಪ್ನಶ್ಚಮಾಯಾಚ ಸ್ವಪ್ನಮಾಯೇ ಅಸದ್ವಸ್ತ್ವಾತ್ಮಿಕೇಸದ್ವಸ್ತ್ವಾತ್ಮಿಕೇ ಇವಲಕ್ಷ್ಯೇತೇ ಅವಿವೇಕಿಭಿಃ। ಯಥಾಚಪ್ರಸಾರಿತ ಪಣ್ಯಾಪಣಗ್ರಹಪ್ರಾಸಾದಸ್ತ್ರೀಪುಂಜನಪದವ್ಯವಹಾರಾಕೀರ್ಣಮಿವ ಗಂಧರ್ವನಗರಂದೃಶ್ಯಮಾನಮೆವಸತ್ ಅಕಸ್ಮಾತ್ ಅಭಾವತಾಂಗತಂ ದೃಷ್ಟಂ ಯಥಾಚ ಸ್ವಪ್ನ ಮಾಯೇ ದೃಷ್ಟೇ ಅಸದ್ರೂಪೇ ತಥಾವಿಶ್ವಮಿದಂದ್ವೈತಂ ಸಮಸ್ತಂ ಅಸತ್‌ದೃಷ್ಟಂ ನನಿರೋಧಃ ಪ್ರಲಯಃ ಉತ್ಪತ್ತಿಃ ಜನನಂ ಬದ್ಧಃ ಸಂಸಾರೀಜೀವಃ, ಸಾಧಕಃ ಸಾಧನವಾನ್ ಮೋಕ್ಷಸ್ಯ ಮುಮುಕ್ಷುಃ ಮೋಚನಾರ್ಥೀ ಮುಕ್ತಃ ವಿಮುಕ್ತಬಂಧಃ ಉತ್ಪತ್ತಿಪ್ರಲಯಯೋರಭಾವಾತ್ ಬದ್ಧಾದಯೋನಸಂತೀತ್ಯೇಷಾ ಪರಮಾರ್ಥತಾ ದ್ವೈತಸ್ಯಾಸತ್ವಾತ್.

ಪ್ರ. ವಾ. ಮಾಧ್ಯಮಿಕವೃತ್ತಿ ಎಂಬ ಬೌದ್ಧಗ್ರಂಥದ್ದು.

ವಾದಿ. ಇದಕ್ಕೇನು ಅರ್ಥವು?

ಪ್ರ. ವಾ. ಮಾಯಿಕಪದಾರ್ಥವು ಹೇಗೆ ಅಸತ್ಯವೋ, ಸ್ವಪ್ನವು ಹೇಗೆ ಅಸತ್ಯವೋ ಗಂಧರ್ವನಗರವು ಹೇಗೆಅಸತ್ಯವೋ, ಹಾಗೆಯೇ ಉತ್ಪತ್ತಿಸ್ಥಿತಿ ಮುಂತಾದ ಯಾವತ್ತೂ ಅಸತ್ಯವು ಎಂದು ಅಭಿಪ್ರಾಯವು.

ವಾದಿ. "ಸ್ವಪ್ನಮಾಯೇ ಯಥಾದೃಷ್ಟೇ" ಎಂಬ ಶ್ಲೋಕದಿಂದ ಗೌಡಪಾದಾಚಾರ್ಯರೂ, ಹಾಗೆಯೇ ಅದರ ವ್ಯಾಖ್ಯಾನದಲ್ಲಿ ಶಂಕರಾಚಾರ್ಯರೂಕೂಡ ಬೌದ್ಧರಂತೆ ಉತ್ಪತ್ತಿ ಮೊದಲಾದ ಜಗತ್ತು ಅಸತ್ಯವೆಂದು ಹೇಳಿದ್ದಾರಷ್ಟೆ?

ಪ್ರ. ವಾ. ಹೌದು. ಉತ್ಪತ್ತಿ ಮೊದಲಾದ ಜಗತ್ತು ಅಸತ್ಯವೆಂದು ಹೇಳಿದ್ದಾರೆ.

ವಾದಿ. § ಶಾಸ್ತ್ರಗಳೇ ಈವಾಕ್ಯಗಳು ಯಾರಿಂದ ಮಾಡಲ್ಪಟ್ಟವು?

ಪ್ರ. ವಾ. ನಂಮ ಶಂಕರಾಚಾರ್ಯರಿಂದ ಮಾಡಲ್ಪಟ್ಟವುಗಳು.

ವಾದಿ. ಇವುಗಳ ಅಭಿಪ್ರಾಯವನ್ನು ಹೇಳಿರಿ.

ಪ್ರ. ವಾ. ಪುಣ್ಯವಿಲ್ಲ, ಪಾಪವಿಲ್ಲ, ಮಂತ್ರಗಳಿಲ್ಲ. ಜಾತಿಭೇದವಿಲ್ಲ, ತಾಯಿಇಲ್ಲ, ತಂದೆಇಲ್ಲ, ದೇವತೆಗಳಿಲ್ಲ, ಸ್ವರ್ಗಾದಿ ಪರಲೋಕಗಳಿಲ್ಲ, ಈಲೋಕವು (ಭೂಲೋಕವು) ಇಲ್ಲ, ವೇದಗಳಿಲ್ಲ, ಯಜ್ಞಗಳಿಲ್ಲ, ಗಂಗಾದಿತೀರ್ಥಗಳಿಲ್ಲ, ಬ್ರಾಹ್ಮಣಾದಿ ವರ್ಣಗಳಿಲ್ಲ, ಬ್ರಹ್ಮಚರ್ಯಾದ್ಯಾಶ್ರಮಗಳಿಲ್ಲ, ಶಾಸ್ತ್ರವಿಲ್ಲ, ಶಾಸ್ತ್ರಾಇಲ್ಲ, ಗುರುಇಲ್ಲ, ಶಿಷ್ಯನಿಲ್ಲ, ಶಿಕ್ಷೆಇಲ್ಲ, ನೀನುಇಲ್ಲ, ನಾನು ಇಲ್ಲ, ಸಾಂಖ್ಯಮತಇಲ್ಲ, ಶೈವಮತವಿಲ್ಲ, ಪಂಚರಾತ್ರಇಲ್ಲ, ಪಾಶುಪತ ಇಲ್ಲ, ಸೌರಮತಇಲ್ಲ, ಗಾಣಾಪತ್ಯಮತವುಇಲ್ಲ, ಶಾಕ್ತಮತಇಲ್ಲ. ಮೀಮಾಂಸಕ ಮುಂತಾದ ಮತಗಳು ಇಲ್ಲ, ಬಹಳಹೇಳುವುದು ಏನು?

---

§ ನಪುಣ್ಯಂನಪಾಪಂ ನಸೌಖ್ಯಂನದುಃಖಂ ನಮಂತ್ರೋನತೀರ್ಥಂ ನವೇದಾನಯಜ್ಞಾಃ॥ ನಮೇ ಜಾತಿಭೇದಃ (ನಿರ್ವಾಣಷಟ್ಕ) ನಮಾತಾಪಿತಾವಾ ನವೇವಾನಲೋಕಾ ನವೇದಾ ನಯಜ್ಞಾನತೀರ್ಥಂಬ್ರುವಂತಿ ನವರ್ಣಾನವರ್ಣಾಶ್ರಮಾಚಾರಧರ್ಮಾನಶಾಸ್ತಾನಶಾಸ್ತ್ರಂ ನಶಿಷ್ಯೋನಶಿಕ್ಷಾನಚತ್ವಂ ನಚಾಹಂ ನಚಾಯಂ ಪ್ರಪಂಚಃ (ದಶಶ್ಲೋಕೀ) ತಸ್ಮಾತ್ ಅವಿದ್ಯಾಕಾರ್ಯತ್ವಾತ್ ಸರ್ವಕರ್ಮಣಾಂ ತತ್ಸಾಧನಾನಾಂಚ ಯಜ್ಞೋಪವೀತಾದೀನಾಂ ಪರಮಾರ್ಥದರ್ಶನನಿಷ್ಠೇನ ತ್ಯಾಗಃ ಕರ್ತವ್ಯಃ (ಉಪದೇಶಸಾಹಸ್ರೀ).

ಸಮಸ್ತ ಜಗತ್ತೂ ಪೂರ್ವದಲ್ಲಿ ಇದ್ದಿಲ್ಲ. ಈಗ್ಯೆ ಇಲ್ಲ. ಮುಂದೆ ಇರುವದಿಲ್ಲ. (ಸುಳ್ಳು ಅದೆ) ಯೇನು ತೋರುತ್ತದೆಯೋ ಅದು ಭ್ರಮದಿಂದ ತೋರುತ್ತದೆ. ಆದಕಾರಣ ಸರ್ವಕರ್ಮಗಳನ್ನು ತ್ಯಾಗಮಾಡತಕ್ಕದ್ದು. ಕರ್ಮಗಳಿಗೆ ಉಪಯುಕ್ತವಾದ ಯಜ್ಞೋಪವೀತಾದಿಗಳನ್ನು ತ್ಯಾಗ ಮಾಡಬೇಕೆಂದು ಅಭಿಪ್ರಾಯವು.

ವಾದಿ. ಶಾಸ್ತ್ರಿಗಳೆ, ನಿಮ್ಮ ಅದ್ವೈತಮತದ ಪ್ರಕಾರ ವೇದಗಳಿಂದ ಹೇಳಲ್ಪಟ ಪುಣ್ಯಪಾಪ, ಸ್ವರ್ಗಲೋಕ, ಬ್ರಾಹ್ಮಣಾದಿವರ್ಣ ಮುಂತಾದ ಜಗತ್ತು ಶುಕ್ತಿರೂಪ್ಯದಂತೆ, ಮರುಮರೀಚಿಕೆಯಂತೆ, (ಬಿಸಲುಕುದುರೆಯಂತೆ) ಶಶವಿಷಾಣದಂತೆ ಸುಳ್ಳು (ಅಸತ್ಯ) ವಾದಮೇಲೆ, ವೇದವು ಪ್ರಮಾಣವು (ಸತ್ಯವಾದ ಅರ್ಥವನ್ನು ತಿಳಿಸಿಕೊಡುವುದು) ಎಂತೆಂಬುವುದು ಹೇಗೆ ಕೂಡುತ್ತದೆ? ಬೌದ್ಧರು ಹೇಳುವಂತೆ ಅಪ್ರಮಾಣವೇ (ಸುಳ್ಳಾದ ಅರ್ಥವನ್ನು ತಿಳಿಸತಕ್ಕದ್ದೆ) ಆಯಿತ್ತಷ್ಟೆ?

ಪ್ರ. ವಾ. ಆಚಾರ್ಯರೆ, ತಾವು ಜನರನ್ನು ಮೋಸಗೊಳಿಸಬೇಕೆಂದು ಒಂದು ಗ್ರಂಥದ ಒಂದು ವಾಕ್ಯವನ್ನು ಹಿಡಿದು ಇನ್ನೊಂದು ಮುಂದಿನವಾಕ್ಯವನ್ನು ಬಿಡುತ್ತೀರಿ. ಸಿದ್ಧಾಂತಲೇಶ ಸಂಗ್ರಹದಲ್ಲೇ ವೇದವು ಅಪ್ರಮಾಣವಾಗುತ್ತದೆಂಬ ತಾವು ಮಾಡಿದಶಂಕೆಯನ್ನು ಪರಿಹಾರ ಮಾಡಿದ್ದಾರೆ.

ವಾದಿ. ಆ ಮುಂದಿನ ವಾಕ್ಯಗಳನ್ನು ಹೇಳಿ ವೇದವು ಪ್ರಮಾಣವೆಂದು ಸ್ಥಾಪನೆ ಮಾಡಬೇಕು.

ಪ್ರ. ವಾ. ಸಿದ್ಧಾಂತಲೇಶ ಸಂಗ್ರಹಕಾರರೇ • ವೇದಗಳಿಂದ ಹೇಳಲ್ಪಟ್ಟ ಯಜ್ಞ ಮೊದಲಾದ ಜಗತ್ತು ಸುಳ್ಳಾದರೆ ವೇದಕ್ಕೆ ಅಪ್ರಾಮಾಣ್ಯ ಬರುತ್ತದೆ ಎಂದು ಶಂಕಿಸಿಕೊಂಡು ಜ್ಯೋತಿಷ್ಟೋಮಾದಿ ಶ್ರುತೀನಾಂ ಇತ್ಯಾದಿ ವಾಕ್ಯಗಳಿಂದ ಯಜ್ಞ, ಸ್ವರ್ಗಾದಿಲೋಕಗಳು, ಬ್ರಾಹ್ಮಣಾದಿವರ್ಣಗಳು ಉಪಾಸನಾಗಳು, ಇವೇ ಮೊದಲಾದ ಜಗತ್ತು ಸುಳ್ಳು ಆದಾಗ್ಯೂ ಆಕರ್ಮವನ್ನು ಮತ್ತು ಉಪಾಸನಾವನ್ನು ಮಾಡುವ ಮನುಷ್ಯನಿಗೆ

• ಜ್ಯೋತಿಷ್ಟೋಮಾದಿ ಶ್ರುತೀನಾಂಚ ಸತ್ವಶುದ್ಧಿ ದ್ವಾರಾ ಬ್ರಹ್ಮಣಿತಾತ್ಪರ್ಯಾನ್ನಾಪ್ರಾಮಾಣ್ಯಂ (ಸಿ. ಲೆ. ಸಂ.) ಕರ್ಮವಾಕ್ಯೈ ರುಪಾಸನವಾಕ್ಯೈಶ್ಚ ವಿಹಿತಾನಿಕರ್ಮೋಪಾಸನಾನಿ ಅನುತಿಷ್ಠತಃ ಶುದ್ಧಿರ್ಭವತಿ ಶುದ್ಧಸತ್ವಸ್ಯ ಚಾಧಿಕಾರಿಣೋ ವೇದಾಂತಶಾಸ್ತ್ರಂ ಬ್ರಹ್ಮ ಪ್ರಮಿತಿಂಜನಯತಿ ...... ಇತಿನಾಪ್ರಾಮಾಣ್ಯ ಪ್ರಸಂಗ ಇತಿ (ವ್ಯಾಖ್ಯಾನ)

ಅಂತಃಕರಣ ಶುದ್ಧಿಯಾಗುತ್ತದೆ. ಶುದ್ಧವಾದ ಅಂತಃಕರಣ ಉಳ್ಳ ಅಧಿಕಾರಿಗೆ (ಮನುಷ್ಯನಿಗೆ) ವೇದಾಂತ ಶಾಸ್ತ್ರವು, ಬ್ರಹ್ಮನ ಯಥಾರ್ಥ ಜ್ಞಾನವನ್ನು ಹುಟ್ಟಿಸಿ ಕೊಡುತ್ತದೆ. ಆದ್ದರಿಂದ ಪ್ರಮಾಣವಾಗುತ್ತದೆಂದು ಹೇಳಿದ್ದಾರಾದ ಪ್ರಯುಕ್ತ ಬೌದ್ಧರಮತದಂತೆ ನಂಮ ಮತದಲ್ಲಿ (ಅದ್ವೈತಮತದಲ್ಲಿ) ವೇದವು ಅಪ್ರಮಾಣವಾಗುತ್ತದೆಂಬ ಶಂಕೆಗೆ ಅವಕಾಶವಿಲ್ಲ.

ವಾದಿ. ಶಾಸ್ತ್ರಿಗಳೇ ಯಜ್ಞಸುಳ್ಳು! ಉಪಾಸನಾ ಸುಳ್ಳು, ಮಾಡುವದುಸುಳ್ಳು, ಮಾಡುವವನುಸುಳ್ಳು, ಶುದ್ಧಿಯುಸುಳ್ಳು, ಶಾಸ್ತ್ರವುಸುಳ್ಳು, ವೇದವುಸುಳ್ಳು ಬ್ರಹ್ಮನು ಸುಳ್ಳು, ಬ್ರಹ್ಮನನ್ನು ಪ್ರತಿಪಾದನೆ ಮಾಡುತ್ತದೆಂಬುವದು ಸುಳ್ಳು, ಆದ್ದರಿಂದ ‡ ಬಂಜೆಯಮಗನು, ಮರುಮರೀಚಿಕೆಯಲ್ಲಿ (ಬಿಸಲ್ಗುದುರೆಯಲ್ಲಿ) ಸ್ನಾನಮಾಡಿ ಗಗನ ಕುಸುಮದಿಂದ ಅಲಂಕೃತನಾಗಿ, ಶಶಶೃಂಗಧನುಃಸನ್ನು ಹಿಡಿದುಕೊಂಡು ಬರುತ್ತಾನೆಂಬ ಹೇಳುವಿಕೆಯಂತೆ, ಬಂಜೆಯಮಗನ ವಾಕ್ಯದಂತೆ ಸುಳ್ಳಾದ ವೇದಗಳಿಂದಾ ಹೇಳಲ್ಪಡುವ ಸುಳ್ಳಾದ ಯಜ್ಞಾದಿಗಳಿಂದಾ ಮತ್ತು ಸುಳ್ಳಾದ ಉಪಾಸನಾಗಳಿಂದಾ ಸುಳ್ಳಾದಮನುಷ್ಯನ ಸುಳ್ಳಾದ ಮನಸ್ಸು ಸುಳ್ಳಾದ ಶುದ್ಧಿಯನ್ನುಹೊಂದಿದನಂತರಾ ಸುಳ್ಳಾದ ವೇದಾಂತ ಶಾಸ್ತ್ರಗಳು ಸುಳ್ಳಾದ ನಿರ್ಗುಣ ಬ್ರಹ್ಮನ ಸುಳ್ಳಾದ ಜ್ಞಾನವನ್ನು ಹುಟ್ಟಿಸಿ ಕೊಡುತ್ತವೆ; ಆದ್ದರಿಂದಾ ಸುಳ್ಳಾದ ವೇದಗಳಿಗೆ ಸುಳ್ಳಾದ ಪ್ರಾಮಾಣ್ಯವುಂಟು ಎಂಬ ತಮ್ಮ ಹೇಳುವಿಕೆಯು ಅಸಂಭವವಾದದ್ದು. ಹೀಗೆಹೇಳುವುದರಿಂದ ವೇದವು ಪ್ರಮಾಣವಾಗುವುದಿಲ್ಲ.

ಪ್ರ. ವಾ. ಆಚಾರ್ಯರೆ, ನಂಮ ಅದ್ವೈತಮತದ ಪ್ರಕ್ರಿಯಾ ತಮಗೆ ಗೊತ್ತು! ಇದ್ದಂತೆ ತೋರುವದಿಲ್ಲ, ಯಜ್ಞಾದಿಗಳು ವ್ಯಾವಹಾರಿಕ ಸತ್ಯವಾದವುಗಳು, ಅಂಥಾ ವ್ಯಾವಹಾರಿಕ ಸತ್ಯವಾದ ಯಜ್ಞಾದಿಗಳನ್ನು ಬೋಧನ ಮಾಡುವ ವೇದಗಳು ವ್ಯಾವಹಾರಿಕ ಪ್ರಮಾಣವಾಗುತ್ತಾ ಇರಲು, ವೇದವು ನಂಮ ಮತದಪ್ರಕಾರ ಅಪ್ರಮಾಣ ವೆಂಬುವದು ಸರಿಯಲ್ಲ.

ವಾ. ವ. ಕೋರ್ಟ್ ಧರ್ಮರಾಜಮಹಾರಾಜರೆ, ಈಶಾಸ್ತ್ರಿಗಳು ಪಾರಮಾರ್ಥಿಕ ಸತ್ಯವೆಂದೂ ವ್ಯಾವಹಾರಿಕ ಸತ್ಯವೆಂದೂ ಎರಡು 'ಸತ್ಯ' ಗಳನ್ನು ಹೇಳುತ್ತಾ, ವೇದವು ವ್ಯಾವಹಾರಿಕ ಸತ್ಯವಾದ ಯಜ್ಞಾದಿಗಳನ್ನು

‡ ಮೃಗತೃಷ್ಣಾಂಭಸಿಸ್ನಾತಃ ಖಪುಷ್ಪಕೃತಶೇಖರಃ ॥ ಏಷವಂಧ್ಯಾಸುತೋಯಾತಿ ಶಶಶೃಂಗ ಧನುರ್ಧರಃ॥

ಶೋಧನ ಮಾಡುತ್ತದೆಂದು ಪುನಃಪುನಃ ಹೇಳುತಾರೆ. ಇದುತಪ್ಪು. ಯಾತಕ್ಕೆಂದರೆ ಪ್ರಮಾಣಗಳು ತಂತಮ್ಮ ವಿಷಯಗಳನ್ನು ಪಾರಮಾರ್ಥಿಕವೆಂದೇ ವಿಷಯೀಕರಿಸುತ್ತವೆ. * ವ್ಯಾವಹಾರಿಕವೆಂದು ವಿಷಯೀಕರಿಸುವುದಿಲ್ಲ ಎಂದು ಭಾಮತೀಕಾರ ಮೊದಲಾದ ಅದ್ವೈತಿಗಳೇ ಒಪ್ಪಿದ್ದಾರೆ. ವ್ಯಾವಹಾರಿಕ ಪ್ರಮಾಣವೆಂಬುವುದು ಅದ್ವೈತಿಗಳ ಪರಿಭಾಷೆಯೇ ಎಂದೂ, ವ್ಯಾವಹಾರಿಕ ಪ್ರಮಾಣವೆಂದರೆ ಅಪ್ರಮಾಣವೆಂದೇ, ಅರ್ಥವೆಂತಲೂ, ಪೂರ್ವದಲ್ಲಿಯೇ ಕೋರ್ಟಿನಲ್ಲಿ ಠರಾವಾಗಿರುತ್ತದೆ. "ವ್ಯವಹಾರಸ್ಯದಶೇಯಂ ವಿದ್ಯಾವಿದ್ಯೇತಿಭೇದಪರಿಭಾಷಾನಾಸ್ತ್ಯೇವ" ಎಂದು ಶಂಕರಾಚಾರ್ಯರೂ ಕೂಡ ಸ್ವಾತ್ಮನಿರೂಪಣದಲ್ಲಿ ಹೇಳಿದ್ದಾರೆ ಯಾದಕಾರಣ ವ್ಯಾವಹಾರಿಕವೆಂದು ಪುನಃಪುನಃ ಪ್ರತಿವಾದಿಗಳು ಹೇಳಕೂಡದೆಂದುಕೋರ್ಟಿನವರು ಅಪ್ಪಣೆಮಾಡಬೇಕು.

ಕೋರ್ಟ್. ಮಿಸ್ಟರ್. ಹರಿಹರಶರ್ಮ! ವ್ಯಾವಹಾರಿಕವಿಚಾರವು ಆಗಿಹೋಗಿದೆ. (ರಿಸ್ಜ್ಯುಡಿಕೇಟ) ಪುನಃಪುನಃ ಆವಿಷಯವನ್ನು ತೆಗಿಯಬಾರದೆಂದು ನಿಮ್ಮ ಕಕ್ಷಿಗಾರರಾದ ಶಾಸ್ತ್ರಿಗಳಿಗೆ ಹೇಳಿರಿ.

ಪ್ರ. ಪ. ಶಾಸ್ತ್ರಿಗಳೇ, ವ್ಯಾವಹಾರಿಕ ಎಂಬ ವಿಚಾರಬೇಡ. ಬೇರೇ ವಿಚಾರ ಮಾಡಿರಿ.

ಪ್ರ. ಆಚಾರ್ಯರೆ, ನಮ್ಮ ನಿರ್ಗುಣಬ್ರಹ್ಮನು ಸುಳ್ಳು = ಅಪ್ರಾಮಾಣಿಕನೆಂದು ಹೇಗೆ ಹೇಳುತ್ತೀರಿ?

ವಾ. ಶಾಸ್ತ್ರಿಗಳೇ, ಈಗ್ರಂಥವು ಯಾವುದು?

ಪ್ರ. ಇದು ನಮ್ಮ "ಅದ್ವೈತಸಿದ್ಧಿ" ಗ್ರಂಥವು.

ವಾ. ಇದು ತಮಗೆ ಮಾನ್ಯವೋ, (ಪ್ರಮಾಣವೋ)?

ಪ್ರ. ಮಾನ್ಯವು (ಪ್ರಮಾಣವು).

ವಾ. ಈವಾಕ್ಯಗಳಿಗೆ ಅರ್ಥವನ್ನು ಹೇಳಿರಿ.

---

* ಶುದ್ಧಂಹಿ ಸದ್ರೂಪಂ...ಕಿಂತ್ವಾವಹಿತಮೇವತಜ್ಞ ಮಿಥ್ಯೈವ ಸಂವ್ಯವ್ಯತಿ ಪದಾರ್ಥಾನಾಂ ಉಪಹಿತಂ ಭವತಿ...... ನಚೈವಮಸತಿ ಕಾಲ್ಪನಿಕಪ್ರಸಂಗಾದಿತಿ ವಾಚ್ಯಂ ಸ್ವತಏವತಸ್ಯಪ್ರಕಾಶತ್ವೇನಸಿದ್ಧತ್ವಾದಿ.

ವೇದವು ಪ್ರಮಾಣವೆನ್ನಿಸಲಾರದು. ಅದ್ವೈತದ ನಿರ್ಗುಣಬ್ರಹ್ಮನೂ ವೇದದಿಂದ ಪ್ರತಿಪಾದಿಸಲ್ಪಡುವುದಕ್ಕೆ ಅಶಕ್ಯನೂ, ಸ್ವಪ್ರಕಾಶನೂ ಎಂದರೆ ಸರ್ವ ಇತರ ಪ್ರಮಾಣಗಳಿಂದ ಅವೇದ್ಯನೂ, ಮತ್ತು ಶಶ ವಿಷಾಣದಂತೆ ಅಪ್ರಾಮಾಣಿಕನೂ ಆದ್ದರಿಂದ ವೇದವು ಅದನ್ನು ಪ್ರತಿ ಪಾದಿಸಲಾರದು. ಮತ್ತು ಅಂಥ ಅಸತ್ಯಾದ ಬ್ರಹ್ಮನನ್ನು ಪ್ರತಿಪಾ ದಿಸುವುದರಿಂದವೇದವು ಪ್ರಮಾಣವೆಂದುಎನ್ನಿಸಲಾರದು. ಅನ್ಯಥಾ, ಶುಕ್ತಿ ರಜತವನ್ನೂ, ಶಶವಿಷಾಣವನ್ನೂ ಪ್ರತಿಪಾದಿಸುವ ಗ್ರಂಥವೂ ಪ್ರಮಾಣ ವೆಂದಿನಿಸಬೇಕಾಗುವುದು. ಹೀಗೆ ಅದ್ವೈತಮತದಲ್ಲಿ ಜಗತ್ತು, ಬ್ರಹ್ಮ ಎಲ್ಲವೂ ಅಸತ್ಯವೇ ಆದ್ದರಿಂದವೇದವು ಸತ್ಯವಾದ ಯಾವ ವಸ್ತುವನ್ನೂ ಬೋಧಿಸಲಾರದು. ಈಪ್ರಕಾರ ಅದ್ವೈತಮತದಲ್ಲಿ ವೇದವು ಸತ್ಯವಾದ ಯಾವ ವಸ್ತುವನ್ನೂ ಬೋಧಿಸಲಾರದಾದ ಪ್ರಯುಕ್ತ ಬೌದ್ಧಮತದಲ್ಲಿ ಹೇಗೋ ಹಾಗೆಯೇ ಅತ್ಯಂತ ಅಪ್ರಮಾಣವೇ ಆಗುತ್ತದೆ. ಹೀಗೆ ಬೌದ್ಧರೂ ಮತ್ತು ಅದ್ವೈತಿಗಳೂ ವೇದವು ಅಸತ್ಯವನ್ನು ಬೋಧಿಸುವ ದೆಂದು ಹೇಳುವುದರಿಂದ ವೇದವು ಪ್ರಮಾಣವು ಎಂಬ ವಿಷಯದಲ್ಲಿಯೂ ಬೌದ್ಧರಿಗೂ ಅದ್ವೈತಿಗಳಿಗೂ ಯಾವಭೇದವೂ ಇರುವದಿಲ್ಲವೆಂಬುವ ದನ್ನು ಚಿತ್ತೈಸಬೇಕೆಂದು ಪ್ರಾರ್ಥನೆ.

---

(ವಿಜ್ಞಾನವಾದಿ ಬೌದ್ಧಾದ್ವೈತ ಮತಸಾಮ್ಯ ವಿಚಾರಣೆ)

---

ಕೋರ್ಟ್. ಆಚಾರ್ಯರೇ ಅದ್ವೈತಮತವು ವಿಜ್ಞಾನವಾದಿಗಳಾದಬೌದ್ಧರ ಮತವೇ ಎಂದು ಹೇಳುತ್ತೀರಷ್ಟೆ, ಅದು ಹೇಗೆ?

ವಾ. ಧರ್ಮರಾಜಮಹಾರಾಜರೇ! ಶೂನ್ಯವಾದವೇ ಬೌದ್ಧರಿಗೆ ಸಮ್ಮತವಾದ ಮುಖ್ಯಮತವು. ಆದರೆ ಕೆಲವು ಮೂಢರಾದ ಶಿಷ್ಯರಿಗೆ, ನಿರ್ವಿಶೇಷ ವಾದ ಶೂನ್ಯವೇ ತತ್ವವು ಮತ್ತು ಯಾವತ್ತೂ ಜಗತ್ತೂ ಶೂನ್ಯದಲ್ಲಿ ಕಲ್ಪಿತವು ಎಂದು ಹೇಳಿದರೆ ಥಟ್ಟನೆ ತಮ್ಮ ಮತದಲ್ಲಿ ವಿಶ್ವಾಸ ಹುಟ್ಟ ಲಾರದೆಂಬ ಅಭಿಪ್ರಾಯದಿಂದ ಶೂನ್ಯವೂ ವಿಜ್ಞಾನವೂ ಒಂದೇ ಆದಾಗ್ಯೂ, ಶೂನ್ಯವೆಂಬ ಹೆಸರು ಹೇಳದೇ ವಿಜ್ಞಾನವೇ ತತ್ವವು ಬಾಹ್ಯಪ್ರಪಂಚ ಯಾವತ್ತೂ ಆವಿಜ್ಞಾನದಲ್ಲಿ ಕಲ್ಪಿತವೆಂದು ಬೌದ್ಧಗ್ರಂಥ ಕರ್ತರು ಹೇಳುತ್ತಾ ಸ್ವಲ್ಪಸ್ವಲ್ಪ ಭೇದವನ್ನು ಶೂನ್ಯವಾದಕನ್ನೂ ವಿಜ್ಞಾನ

ವಾದವನ್ನು ತೋರಿಸುತ್ತಾರೆ. ಪರಂತು, ವಿಜ್ಞಾನವಾದವೂ ಶೂನ್ಯವಾದವೂಎಂಬ ಎರಡೂಮತಗಳು ಒಂದೇ ಆದುದರಿಂದ, ಅದ್ವೈತಮತವು ಶೂನ್ಯವಾದಿಮತವು ಒಂದೇ ಎಂದು ನಾವು ಹಿಂದೆ ತೋರಿಸಿರುವುದರಿಂದ ವಿಜ್ಞಾನವಾದಿ ಮತವೂ ಅದ್ವೈತಮತವು ಒಂದೇ ಆಗುತ್ತದೆ. ಮತ್ತು ಉಭಯಮತಗಳ ತತ್ವಗಳನ್ನು ತುಲನಾ ಮಾಡಿದರೂ ಒಂದೇ ಆಗುತ್ತವೆ.

ಕೋರ್ಟ್. ವಿಜ್ಞಾನವಾದಿಗಳಿಗೂಕೂಡ ಶೂನ್ಯ ಒಂದೇ ತತ್ವವೆಂಬುವದರಲ್ಲೇ ತಾತ್ಪರ್ಯವು ಮೂಢರಾದ ಶಿಷ್ಯರಿಗೋಸ್ಕರ ವಿಜ್ಞಾನವು ತತ್ವವೆಂದು ಹೇಳಿದ್ದಾರೆಂದು ತಮಗೆ ಹೇಗೆ ಗೊತ್ತಾಯಿತು?

ವಾದಿ. * ಹೀನರು (ಕನಿಷ್ಟರು) ಮತ್ತು ಮಧ್ಯಮರು ಉತ್ತಮರೆಂತ ಶಿಷ್ಯರು ಮೂರುವಿಧರು. ಹೀನರಾದ (ಕನಿಷ್ಟರಾದ) ಶಿಷ್ಯರಗೋಸ್ಕರ ಬಾಹ್ಯಪದಾರ್ಥಗಳಿಗೆ ಸತ್ಯತ್ವವನ್ನು ಹೇಳುತ್ತಾ ಕ್ಷಣಿಕತತ್ವವು ಹೇಳಲ್ಪಟ್ಟಿದೆ. ಮಧ್ಯಮರಾದ ಶಿಷ್ಯರನ್ನು ಕುರಿತು ವಿಜ್ಞಾನವು ಒಂದೇ ಸತ್ಯವಾದದ್ದು, ಜಗತ್ತು, ಸುಳ್ಳು ಎಂದು ಹೇಳಿ ಆ ಉಭಯರಗಳಿಗೆ ಶೂನ್ಯವು ಒಂದೇ ತತ್ವವೆಂಬ ಬುದ್ಧಿಯನ್ನು ಹುಟ್ಟಿಸುತ್ತಾರೆ. ಉತ್ತಮರಾದ ಶಿಷ್ಯರಿಗೆ ಪ್ರಥಮದಲ್ಲಿಯೇ, ಶೂನ್ಯವು ಒಂದೇ ತತ್ವವು ಯಾವತ್ತಾ ಜಗತ್ತು ಮಿಥ್ಯಾ ಎಂದು ಉಪದೇಶ ಮಾಡಿದ್ದಾರೆಂದು ಬೌದ್ಧರು ಅದ್ವೈತಿಗಳು ಹೇಳಿರೋಣದರಿಂದ ವಿಜ್ಞಾನವಾದವನ್ನಾ ಉಪದೇಶಮಾಡುವಬೌದ್ಧರಿಗೂ ಕೂಡ ಶೂನ್ಯವೇ ತತ್ವವೆಂಬುವದರಲ್ಲಿ ತಾತ್ಪರ್ಯ ಉಂಟೆಂದು ಗೊತ್ತಾಯಿತು.

ಕೋರ್ಟ್. ಶಾಸ್ತ್ರಿಗಳೇ! ಆಚಾರ್ಯರು ವಿಜ್ಞಾನವಾದಿಗಳಾದ ಬೌದ್ಧರ ಮತದ ಮತ್ತು ಅದ್ವೈತಮತದ ತತ್ವಗಳನ್ನು ತುಲನಾಮಾಡಿದರೆ ಅವೆ

---

* ದೇಶನಾಲೋಕನಾಥಾನಾಂ ಸತ್ವಾಶಯವಶಾನುಗಾಃ । ಭಿದ್ಯಂತೇ ಬಹುಧಾಲೋಕೇ ಉಪಾಯೈರ್ಬಹುಭಿಃಪುನಃ ॥ ಗಂಭೀರೋತ್ತಾನ ಭೇದೇನ ಕ್ವಚಿಚ್ಚೋಭಯಲಕ್ಷಣಾ । ಭಿನ್ನಾಪಿದೇಶನಾಭಿನ್ನಾ ಶೂನ್ಯತಾದ್ವಯಲಕ್ಷಣಾ ॥ (ಬೋಧಿಚಿತ್ತ ವಿವರಣ) ಸಚ-ಬಹುಪ್ರಕಾರಃ ...... ವಿನೇಯಭೇದಾದ್ವಾ (ಬ್ರ. ಸೂ. ೨.೨.೧೮ ಶಂ. ಭಾ.) "ಹೀನಮಧ್ಯಮೋತ್ಕೃಷ್ಟಧಿಯೋಹಿ ಶಿಷ್ಯಾಭವಂತಿ ಯೇ ಹೀನಮತಯಸ್ತೇ ಸರ್ವಾಸ್ತಿತ್ವವಾದೇನ ತದಾಶಯಾನುರೋಧಾತ್ ಶೂನ್ಯತಾಯಾಮವತಾರ್ಯಂತೇ, ಯೇತು ಮಧ್ಯಮಾಸ್ತೇ ಜ್ಞಾನಮಾತ್ರಾಸ್ತಿತ್ವೇನ ಶೂನ್ಯತಾಯಾಮವತಾರ್ಯಂತೇ. ಯೇತು ಪ್ರಕೃಷ್ಟಮತಯಸ್ತೇಭ್ಯಃ ಸಾಕ್ಷಾದೇವ ಶೂನ್ಯತತ್ವಂ ಪ್ರತಿಪಾದ್ಯತೇ" (ಭಾಮತೀ ೨-೨-೧೮)

ರಡೂ ಒಂದೇ ಆಗುವವು ಎನ್ನುತ್ತಾರೆ. ಅದು ಹೇಗೆಂಬುವುದನ್ನು ವಿಚಾರಮಾಡಿರಿ.

ಪ್ರ. ವಾ. ಆಚಾರ್ಯರೇ! ನಮ್ಮ ಅದ್ವೈತಮತವೂ ವಿಜ್ಞಾನವಾದಿಗಳಾದ ಬೌದ್ಧರಮತವೂ ಒಂದೇ ಎಂದು ಹೇಳುವದಕ್ಕೆ ಆಧಾರವೇನು?

ವಾದಿ. ಗೌಡಪಾದಾಚಾರ್ಯ ಶಂಕರಾಚಾರ್ಯ ಮೊದಲಾದ ಅದ್ವೈತಿಗಳ ಗ್ರಂಥಗಳು ಮತ್ತು ಬೌದ್ಧರ ಗ್ರಂಥಗಳು ಆಧಾರವಾಗಿವೆ.

ಪ್ರ. ವಾ. ಅದ್ವೈತಿಗಳ ಗ್ರಂಥಗಳನ್ನು ಹೇಳಿರಿ.

ವಾದಿ. ಶಾಸ್ತ್ರಿಗಳೇ! ಈಪುಸ್ತಕವು ಯಾವದು?

ಪ್ರ. ವಾ. ಇದರಲ್ಲಿ ಮೂರು ಗ್ರಂಥಗಳಿವೆ (೧) ಮಾಂಡೂಕ್ಯೋಪನಿಷತ್ಕಾರಿಕಾ ಗೌಡಪಾದರು ಮಾಡಿದ್ದು (೨) ಅದಕ್ಕೆ ಶಂಕರಾಚಾರ್ಯರ ಭಾಷ್ಯವು (3) ಅದಕ್ಕೆ ಆನಂದಗಿರಿಯ ಟೀಕೆಯು.

ವಾದಿ. ‡ ಈವಾಕ್ಯಗಳ ಅಭಿಪ್ರಾಯವನ್ನು ಹೇಳರಿ.

ಪ್ರ. ವಾ. ಜ್ಞಾನವು ಒಂದೇ ಪರಮಾರ್ಥಸತ್ಯವು (ಖರೇಸತ್ಯವು) ಆಜ್ಞಾನದಲ್ಲಿಯೇ ಜ್ಞಾತೃಜ್ಞೇಯ ಮೊದಲಾದ ಯಾವತ್ತೂ ಜಗತ್ತು ಕಲ್ಪಿತವಾದದ್ದೆಂಬ ಬೌದ್ಧಮತವನ್ನೇ ನೀವು (ಗೌಡಪಾದಾಚಾರ್ಯರು) ಸಂಗ್ರಹ ಮಾಡಿರುವಿರಿ (ಸ್ವೀಕರಿಸಿದ್ದೀರಿ) ಎಂದು ಆಗಿನ ಕಾಲದ ಪಂಡಿತರು ಆಕ್ಷೇಪಮಾಡಲು ಗೌಡಪಾದಾಚಾರ್ಯರು "ಜ್ಞಾನಂ ನೈತದ್ಬುದ್ಧೇನ ಭಾಷಿತಂ" ಎಂದು ಸಮಾಧಾನ ಹೇಳಿದ್ದಕ್ಕೆ, ಶಂಕರಾಚಾರ್ಯರು ವ್ಯಾಖ್ಯಾನ ಮಾಡಿದ್ದಾರೆ. ಯದ್ಯಪಿ ಜ್ಞಾನ ಒಂದೇ ಸತ್ಯವು, ಆ ಜ್ಞಾನ

---

‡ ಜ್ಞಾನಮಾತ್ರಂ ಪಾರಮಾರ್ಥಿಕಂ ತತ್ರೈವ ಜ್ಞಾತೃಜ್ಞೇಯಾದಿ ಕಲ್ಪಿತಮಿತಿ ಸೌಗತ ಮತಮೇವ ಭವತಾಽಪಿ ಸಂಗೃಹೀತ ಮಿತ್ಯಾಶಂಕ್ಯಾಹ ಜ್ಞಾನಮಿತಿ.

ಜ್ಞಾನಂ ನೈತದ್ಬುದ್ಧೇನಭಾಷಿತಂ.

ಜ್ಞಾನಜ್ಞೇಯ ಜಾತೃಭೇದರಹಿತಂ ಪರಮಾರ್ಥತತ್ವ ಮದ್ವಯಮೇತನ್ನ ಬುದ್ಧೇನಭಾಷಿತಂ. ಯದ್ಯಪಿ ಬಾಹ್ಯಾರ್ಥ ನಿರಾಕರಣಂ ಜ್ಞಾನಮಾತ್ರಕಲ್ಪನಾ ಚಾದ್ವಯವಸ್ತು ಸಾಮೀಪ್ಯಮುಕ್ತಂ. ಇದಂತು ಪರಮಾರ್ಥತತ್ವ ಮದ್ವೈತಂ ವೇದಾಂತೇ ಷ್ವೇವ ವಿಜ್ಞೇಯ ಮಿತ್ಯರ್ಥಃ.

ದಲ್ಲಿಯೇ ಬಾಹ್ಯವಾದ ಬ್ರಾಹ್ಮಣವರ್ಣ ಮೊದಲಾದ ಯಾವತ್ತೂ ಜಗತ್ತು ಕಲ್ಪಿತವು ಆದ್ದರಿಂದ ಸುಳ್ಳು ಎಂಬುವದನ್ನು ಬೌದ್ಧರಂತೆ ನಾವೂ ಸ್ವೀಕಾರಮಾಡಿದ್ದೇವೆ, ಆದರೂ ಜ್ಞಾನ ಜ್ಞೇಯ ಜ್ಞಾತೃ ಭೇದ ರಹಿತವಾದ ಅದ್ವಯ = ದ್ವಿತೀಯವಸ್ತುರಹಿತವಾದ ಪರಮಾರ್ಥ ತತ್ವವು ಬುದ್ಧನಿಂದ ಹೇಳಲ್ಪಟ್ಟಿಲ್ಲ. ಅದ್ವಯವಾದ ಈ ಪರಮಾರ್ಥ ತತ್ವವು ವೇದಾಂತಗಳಲ್ಲೇ ತಿಳಿಯಲ್ಪಡತಕ್ಕದ್ದು. ಆದ್ದರಿಂದ ಬೌದ್ಧ ಮತವು ಅದ್ವೈತಮತವು ಒಂದೇ ಎಂದು ಶಂಕಿಸುವದಕ್ಕೆ ಅವಕಾಶವು ಹೇಗೆ ಬರುವದೆಂದು ಅಭಿಪ್ರಾಯವು.

ವಾದಿ. ಈಗ್ರಂಥವು ಯಾವದು

ಪ್ರ. ವಾ. ಸ್ವಯಂಪ್ರಕಾಶಾನಂದ ಸರಸ್ವತಿಗಳಿಂದ ಮಾಡಲ್ಪಟ್ಟ ಗೌಡಪಾದಾಚಾರ್ಯಕೃತಕಾರಿಕಾದ ಮಿತಾಕ್ಷರವೆಂಬ ವ್ಯಾಖ್ಯಾನವು.

ವಾದಿ. "ಜ್ಞಾನಂನೈತತ್‌ಬುದ್ಧೇನ ಭಾಷಿತಂ" ಎಂಬ ಶ್ಲೋಕ ವ್ಯಾಖ್ಯಾನದ ತಾತ್ಪರ್ಯವನ್ನು ಹೇಳಿರಿ?

ಪ್ರ. ವಾ. ಮೇಲೆ ಹೇಳಿದ ಗ್ರಂಥಗಳತಾತ್ಪರ್ಯದಂತೆಯೇ ಬೌದ್ಧಮತ ಸಾಮ್ಯಶಂಕಾ ಮಾಡಿಕೊಂಡು ಪರಿಹಾರ ಮಾಡಬೇಕೆಂಬುವದೇ.

ವಾದಿ. ಈಗ್ರಂಥವು ಯಾವದು?

ಪ್ರ. ವಾ. ಇದು ಗೌಡಪಾದೀಯ ವಿವೇಕ ಗ್ರಂಥವು.

ವಾದಿ. "ಜ್ಞಾನಂ" ಎಂಬ ಶ್ಲೋಕ ವಾಖ್ಯಾನದ ಅಭಿಪ್ರಾಯವನ್ನು ಹೇಳಿರಿ.

ಪ್ರ. ವಾ. ಎಷ್ಟು ಕೇಳುತ್ತೀರಿ? ಈಗ್ರಂಥದ ಅಭಿಪ್ರಾಯವೂ ಮೇಲೆ ಹೇಳಿದ ಗ್ರಂಥಗಳ ಅಭಿಪ್ರಾಯದಂತೆಯೇ(ಬೌದ್ಧಮತಕ್ಕೂ ಅದ್ವೈತಮತಕ್ಕೂ ಸಾಮ್ಯ, ಶಂಕಾ, ಪರಿಹಾರ)

ವಾದಿ. ಇದು ಯಾವಗ್ರಂಥವು?

ಪ್ರ. ವಾ. ವಿದ್ಯಾರಣ್ಯರು ಮಾಡಿದ ಶಂಕರವಿಜಯವು.

ವಾದಿ. • ಈಶ್ಲೋಕಗಳಿಗೆ ಅಭಿಪ್ರಾಯವನ್ನುಹೇಳಿರಿ?

ಪ್ರ. ವಾ. ಶಂಕರಾಚಾರ್ಯರು ಒಂದು ದೇವಾಲಯಕ್ಕೆ ಹೋಗುವಾಗ್ಗೆ ನಿಮಗೆ ದೇವಾಲಯ ಪ್ರವೇಶಮಾಡಬೇಕೆಂಬ ಇಚ್ಛಾ ಇದ್ದರೆ ಬೌದ್ಧರ ಮತಕ್ಕ್ಯೂ ನಿಮ್ಮ ಮತ (ಅದ್ವೈತಮತ) ಕ್ಕ್ಯೂ ಏನು ಭೇದವು ಹೇಳಿರಿ. ಅನಂತರ ಪ್ರವೇಶಮಾಡಿರೆಂದು ಹೇಳಲು ವಿಜ್ಞಾನವಾದಿಗಳು ವಿಜ್ಞಾನಕ್ಕೆ ಕ್ಷಣಿಕತ್ವನನ್ನು ಮತ್ತು ಬಹುತ್ವವನ್ನೂ ಒಪ್ಪುತ್ತಾರೆ. ನಾವು ವಿಜ್ಞಾನವು ಒಂದು ಮತ್ತು ನಿತ್ಯವೆಂದು ಒಪ್ಪುತ್ತೇವೆಂದು ವಿಶೇಷವನ್ನು ಹೇಳಿದ್ದಾರೆ.

ವಾದಿ. ಶಾಸ್ತ್ರಿಗಳೇ! ಈಗ್ರಂಥದ ಹೆಸರೇನು? ಯಾರುಮಾಡಿದ್ದು?

ಪ್ರ. ವಾ. ಇದು ಸಂಕ್ಷೇಪ ಶಾರೀರಕವೆಂಬ ಗ್ರಂಥವು. ಸರ್ವಜ್ಞಮುನಿಗಳಿಂದ ರಚಿತವಾದದ್ದು. ಈಟೀಕೆಯು ಅದ್ವೈತಸಿದ್ಧಿಕಾರರಾದ ಮಧುಸೂದನ ಸರಸ್ವತಿಗಳು ಮಾಡಿದ್ದು.

ವಾದಿ † ಈಶ್ಲೋಕಗಳಿಗ್ಯೂ ಇವಗಳ ವ್ಯಾಖ್ಯಾನಕ್ಕ್ಯೂ ಅಭಿಪ್ರಾಯವನ್ನುಹೇಳಿರಿ.

---

• ವಿವಿಕ್ಷುರ್ಯದಿ ದೇವತಾಲಯಂ । ವಿಜ್ಞಾನ ವಾದಸ್ಯಚ ಕಿಂ ವಿಭೇದಕಂ ಭವನ್ಮತಾದಾಬ್ರುಹಿತತಃ ಪರಂವ್ರಜ । ವಿಜ್ಞಾನವಾದೀಕ್ಷಣಿಕತ್ವಮೇಷಾಮುಂ ಗೀಚಕಾರಾಪಿ ಬಹುತ್ವಮೇಷಃ । ವೇದಾಂತವಾದೀ ಸ್ಥಿರಸಂವಿದೇಕೇತ್ವಂ ಗೀಚಕಾರೇತಿ ಮಹಾನ್ವಿಶೇಷಃ ॥

† ನನುಸರ್ವಶ್ಯಾಪಿ ವಿಯದಾದಿಪ್ರಪಂಚಸ್ಯ ಸ್ವಪ್ನತುಲ್ಯತ್ವೇ ತದ್ವಿಜ್ಞಾನಾತ್ಮಕಮೇವ ಸರ್ವಂ ವಕ್ತವ್ಯಂ ತತಶ್ಚ ವಿಜ್ಞಾನವಾದಿಸಮಯ ಪ್ರವೇಶಾಪತ್ತಿರಿತಿ ಶಂಕತೇ.

ನನುಶಾಕ್ಯಭಿಕ್ಷು ಸಮಯೇನಸಮಃ ಪ್ರತಿಭಾತ್ಯಯಂಚ ಭಗವತ್ಸಮಯಃ ಯದಿಬಾಹ್ಯವಸ್ತು ವಿತಿಥಂ ನು ಕಥಂ ಸಮಯಾವಿಮೌಚ ಸದೃಶಾಭವತಃ (೨.೨೫) ಯದಿ ಬೋಧಎವ ಪರಮಾರ್ಥ ವಪುರ್ನತು ಬೋಧ್ಯಮಿತ್ಯಭಿಮತಂ ಭವತಿ ನನುಚಾಶ್ರಿತಂ ಭವತಿ ಬುದ್ಧಮುನೇ ರ್ಮತಮೇವ ಕೃತ್ಸ್ನಮಿಹ ಮಸ್ಕರಿಭಿಃ (೨.೨೬)

ನನ್ವಿತಿ ಶಾಕ್ಯೋಜಿನ ಬೌದ್ಧೋ ವಿಜ್ಞಾನವಾದೀ ತತ್ಸಿದ್ಧಾಂತೇನೇತ್ಯರ್ಥಃ ಭಗವತಃ ಭಗವತ್ಪಾದಾದೇಃ (ಶಂಕರಾದೇಃ) ಸಮಯ ಇತ್ಯರ್ಥಃ ನನು ವಿಜ್ಞಾನವಾದಿನಾ ವೇದ ಪ್ರಾಮಾಣ್ಯಾದ್ಯನಭ್ಯುಪಗಮಾತ್ ಕಥಂ ತದಭ್ಯುಗಂತ್ರ ಭಗವತ್ಸಮಯಸ್ಯ ತತ್ಸಮಯತುಲ್ಯತೇತಿಚೇತ್ ಸತ್ಯಂ ತಥಾಪಿ ವಿಜ್ಞಾನಾತಿರಿಕ್ತ ವಿಜ್ಞೆಯಾನಭ್ಯುಪಗಮೆ ಕಥಂನ ತತ್ತೌಲ್ಯಂ ತೇನಾಪಿ ತಥೈವಾಂಗೀಕಾರಾದಿತ್ಯಾಹ ಯದೀತಿ ಬಾಹ್ಯಂವಿಜ್ಞಾನಾತಿರಿಕ್ತಂ ವಸ್ತು ವಿತಥಂ ಅಲೀಕಂ ಕಥಂನ್ವಿತಿ ಸಂಬಂಧಃ (೨.೨೭)

ಪ್ರ. ವಾ. ಬೌದ್ಧರಂತೆ ಜ್ಞಾನವು ಒಂದೇ ಸತ್ಯವು. ಆ ಜ್ಞಾನದಲ್ಲಿ ಆಕಾಶ ಮೊದಲಾದ ಯಾವತ್ತೂ ಪ್ರಪಂಚವು ಕಲ್ಪಿತವಾದದ್ದು. ಸ್ವಪ್ನಪದಾರ್ಥದಂತೆ ಸುಳ್ಳಾದದ್ದು. ಎಂದು ಅದ್ವೈತಿಗಳು ಹೇಳುವದರಿಂದ ಅದ್ವೈತಮತವು ಬೌದ್ಧಮತದಿಂದ ಸಮಪಾದದ್ದೆಂದು ಹೇಳಲು, ಅದರಮೇಲೆ ವಿಜ್ಞಾನವಾದಿಗಳು ವೇದಕ್ಕೆ ಪ್ರಾಮಾಣ್ಯವನ್ನು ಒಪ್ಪುವದಿಲ್ಲ. ಅದ್ವೈತಿಗಳು ವೇದಕ್ಕೆ ಪ್ರಾಮಾಣ್ಯವನ್ನು ಒಪ್ಪುತ್ತಾರಾದ್ದರಿಂದ ಅದ್ವೈತ ಮತವು ಬೌದ್ಧಮತದಿಂದ ಸಮಪಾದದ್ದೆಂತ ಹೇಗೆ ಹೇಳುತ್ತೀರೆಂದು ಆಕ್ಷೇಪಣೆಯು ಬರಲು ವೇದದಿಂದ ಹೇಳಿಸಿಕೊಳ್ಳಲ್ಪಡುವ ಜ್ಞಾನಾತಿರಿಕ್ತವಾದ ಪದಾರ್ಥಗಳನ್ನು ಅದ್ವೈತಿಗಳು ಒಪ್ಪದೇ ಇದ್ದಮೇಲೆ, ಅದ್ವೈತಿಗಳುಕೂಡ ವೇದವು ಅಪ್ರಮಾಣವೆಂದು ಒಪ್ಪಿದ ಹಾಗಾಯಿತು. ಆದುದರಿಂದ ಅದ್ವೈತಮತವು ಬೌದ್ಧಮತವೇ ಎಂದು ಸಿದ್ಧಿಸುತ್ತದೆಂಬ ಅಭಿಪ್ರಾಯವು.

ವಾದಿ. ಈಗ್ರಂಥವು ಯಾವದು?

ಪ್ರ. ವಾ. ತತ್ವಸಂಗ್ರಹವೆಂಬ ಬೌದ್ಧಗ್ರಂಥವು.

ವಾದಿ. • ಈಶ್ಲೋಕಗಳಿಗೆ ಅಭಿಪ್ರಾಯವನ್ನು ಹೇಳಿರಿ.

ಪ್ರ. ವಾ. ಪೃಥ್ವಿ ಮೊದಲಾದ ಯಾವತ್ತೂ ಜಗತ್ತು ನಿತ್ಯವಾದ ಜ್ಞಾನ ರೂಪ ತತ್ವದಲ್ಲಿ ಕಲ್ಪಿತವಾದದ್ದು. ಆ ಜ್ಞಾನರೂಪನೇ ಆತ್ಮನೆಂದು ಅದ್ವೈತಿಗಳು ಹೇಳುತ್ತಾರೆ. ಆದುದರಿಂದ ಅವರಮತವೂ ನಮ್ಮಮತವೂ (ಬೌದ್ಧಮತವೂ) ಒಂದೇ ಆದಕಾರಣ ಅದ್ವೈತಮತವು ಸರಿ ಆದದ್ದೇ, ಆದರೂ ಜ್ಞಾನವು ನಿತ್ಯವೆಂದು ಹೇಳುವದರಿಂದ ಆಮತವು ಸ್ವಲ್ಪ ದುಷ್ಟವಾದದ್ದೆಂಬ ಅಭಿಪ್ರಾಯವು.

ಕೋರ್ಟ್. ಆಚಾರ್ಯರೇ! ಎಷ್ಟುಗ್ರಂಥಗಳನ್ನು ಕೇಳುತ್ತೀರಿ? ಕೋರ್ಟಿನ ಕಾಲವನ್ನು ಬಹಳವಾಗಿ ಕಳಿಯಬೇಡರಿ. ಮುಂದಿನ ವಿಚಾರನಡೆಯಲಿ.

ವಾದಿ. ಪ್ರಭುಗಳೇ! ಇದು ಅವಶ್ಯಕವಾದ ಪ್ರಯುಕ್ತ ಕೇಳಿದ್ದೇನೆ. ಇನ್ನೂ ಅನೇಕ ಗ್ರಂಥಗಳನ್ನು ಕೇಳತಕ್ಕದ್ದು ಅವಶ್ಯಕವಾಗಿದೆ ಬೇಡೆಂದರೆ ಬಿಡು

---

• ನಿತ್ಯಜ್ಞಾನ ವಿವರ್ತೋಽಯಂ ಕ್ಷಿತಿತೇಜೋ ಜಲಾದಿಕಃ ॥ ಆತ್ಮಾ ತದಾತ್ಮಕಶ್ಚೇತಿ ಸಂಗಿರಂತೆ ಪರೇಪುನಃ ...... ತೇಷಾಮಲ್ಪಾ ಪರಾಧಂತು ದರ್ಶನಂ ನಿತ್ಯತೋಕ್ತಿತಃ (33ರ ತತ್ವಸಂಗ್ರಹ ಬೌದ್ಧಗ್ರಂಥ.)

ತ್ರೀಸೆ. ಅವಶ್ಯವಾದಾಗ್ಗೆ ಅಪ್ಪಣೆ ಯಾಗಬೇಕು.

ಕೋರ್ಟ್. ಎಸ್ (*Yes*).

ವಾದಿ. ಈಅದ್ವೈತಗ್ರಂಥಗಳಿಂದಲೂ ಮತ್ತು ಬೌದ್ಧಗ್ರಂಥಗಳಿಂದಲೂ ಅದ್ವೈತ ಮತ ತತ್ವಗಳೂ ಬೌದ್ಧಮತ ತತ್ವಗಳೂ ವಂದೇ ಎಂದು ಸಿದ್ಧಿಸಿತಷ್ಟೇ?

ಪ್ರ. ವಾ. ಆಚಾರ್ಯರೇ! ಅದ್ವೈತಿಗ್ರಂಥಗಳ ಅಭಿಪ್ರಾಯವಾಗಲೀ ಬೌದ್ಧ ಗ್ರಂಥಗಳ ಅಭಿಪ್ರಾಯವಾಗಲೀ ತಮಗೆ ಆದಂತೆ ತೋರುವದಿಲ್ಲ ಕೆಲವು ಭಾಗದಲ್ಲಿ ಉಭಯಮತ ತತ್ವಗಳಿಗೆ ಐಕ್ಯವು ಇದ್ದಾಗ್ಯೂ ಕೆಲವು ಭಾಗದಲ್ಲಿ ಆಗ್ರಂಥಗಳಲ್ಲಿಯೇ ಅದ್ವೈತಮತ ತತ್ವಗಳಿಗೆ ಬೌದ್ಧಮತ ತತ್ವಗಳಿಂದ ಭೇದವನ್ನು ಹೇಳಿದ್ದಾರೆ. ಅದನ್ನಾ ತಿಳಿದುಕೊಳ್ಳದೆ ಅದ್ವೈತಮತವೂ ಬೌದ್ಧಮತವೂ ವಂದೇ ಎಂದು ಹೇಳುವದು ಹೇಗೆ ಕೂಡುತ್ತದೆ.

ವಾದಿ. ಶಾಸ್ತ್ರಿಗಳೇ! ಬೌದ್ಧಮತಕ್ಕಾ ಅದ್ವೈತಮತಕ್ಕಾ ಎಷ್ಟು ಅಂಶದಲ್ಲಿ ಐಕ್ಯವನ್ನು, ಎಷ್ಟು ಅಂಶದಲ್ಲಿ ಭೇದವನ್ನು ಹೇಳಿದ್ದಾರೆ ಹೇಳಿರಿ.

ಪ್ರ. ವಾ. ಜ್ಞಾನ ಒಂದೇ ಪಾರಮಾರ್ಥಿಕ ಸತ್ಯವಾದದ್ದು. ಆ ಜ್ಞಾನ ದಲ್ಲಿಯೇ ಯಾವತ್ತೂ ಜಗತ್ತು ಕಲ್ಪಿತವಾದದ್ದೆಂಬುವದನ್ನಾ ಬೌದ್ಧರು ಒಪ್ಪುತ್ತಾರೆ, ಅದ್ವೈತಿಗಳೂ ಒಪ್ಪುತ್ತಾರೆ. ಆದರೂ ಆ ಜ್ಞಾನವೆಂಬ ತತ್ವವು ಬೌದ್ಧರು ಕ್ಷಣಿಕ ವೆಂತಲೂ, ಪ್ರತಿಕ್ಷಣ ಭಿನ್ನಭಿನ್ನ ವಾಗೋಣ ವರಿಂದ ಆನೇಕ ಎಂತಲೂ ಅನ್ನುತ್ತಾರೆ. ಅದ್ವೈತಿಗಳು ಆಜ್ಞಾನವು (ಬ್ರಹ್ಮವು) ಒಂದೇ ಎಂತಲೂ ನಿತ್ಯವಾದದ್ದು ಎಂತಲೂ ವೇದಾಂತದಿಂದ ತಿಳಿಯಲಿಕ್ಕೆ ಯೋಗ್ಯವಾದದ್ದೆಂತಲೂ ಒಪ್ಪುತ್ತಾರೆ. ಈ ಅಂಶದಲ್ಲಿ ಬೌದ್ಧಮತಕ್ಕಾ ಅದ್ವೈತಮತಕ್ಕಾ ಭೇದಉಂಟೆಂತ ಸ್ಪಷ್ಟವಾಗಿ ಹೇ ರಲಿಕ್ಕಾಗಿ, ಈ ಎರಡೂ ಮತಗಳು ವಂದೇ ಎಂತ ಹೇಗೆ ಹೇಳುವದು ಬೌದ್ಧಮತದಿಂದ ಅದ್ವೈತಮತಕ್ಕೆ ಕೆಲವು ಅಂಶಗಳಲ್ಲಿ ಸಾಮ್ಯ ಬಂ ಮಾತ್ರಕ್ಕೆ ಆ ಎರಡೂ ಮತಗಳು ವಂದೇ ಆಗುವದಾದ ಒಂದೊಂದು ಮತಗಳ ಕೆಲವು ತತ್ವಗಳು ಇನ್ನೊಂದು ಮತದ ಕೆಲ ತತ್ವಗಳಿಂದ ಸಮವಾಗಿಯೇ ಇರುತ್ತವೆ. ಆದುದರಿಂದ ಅಮತಗಳ ಒಂದೇ ಆಗಬೇಕಾಗುವದಷ್ಟೇ?

ವಾ. ಪ. ಶಾಸ್ತ್ರಿಗಳೇ! ಅದ್ವೈತಮತ ತತ್ವಗಳಿಗೆ ಬೌದ್ಧರಮತ ತತ್ವಗಳಿ

ಭೇದ ವಿದ್ದರೆ ಆ ಎರಡು ಮತಗಳು ಬೇರೆ ಯಾಗ ಬಹುದು. ಹಾಗೆ ಭೇದವಿದ್ದರೆ ತಿಳಿಸಿರಿ.

ಪ್ರ. ವಾ. "ಇದಂತು ಪರಮಾರ್ಥತತ್ವಮದ್ವೈತಂ ವೇದಾಂತೇಷ್ವೇವಜ್ಞೇಯಂ" ಎಂದು ಶಂಕರಾಚಾರ್ಯರು ಹೇಳಿದ ಪ್ರಕಾರ ನಮ್ಮ ಅದ್ವೈತಿಗಳ ಬ್ರಹ್ಮವು (ಜ್ಞಾನವು) ವೇದಾಂತಗಳಿಂದ ತಿಳಿಯಲಿಕ್ಕೆ ಯೋಗ್ಯವಾದದ್ದು ಬೌದ್ಧರ ವಿಜ್ಞಾನವಾಗಲಿ, ಶೂನ್ಯವಾಗಲೀ ವೇದಾಂತಗಳಿಂದ ತಿಳಿಯಲಿಕ್ಕೆ ಯೋಗ್ಯವಾದವು ಅಲ್ಲಾದುದರಿಂದ ಅದ್ವೈತರ ಬ್ರಹ್ಮವು, ಬೌದ್ಧರ ಶೂನ್ಯರೂಪವು ವಿಜ್ಞಾನರೂಪವು ಹೇಗೆ ಆಗುವದು.

ವಾ. ವಿ. ಅದ್ವೈತಿಗಳು ಹೇಳುವ ಬ್ರಹ್ಮನಲ್ಲಿ ಪ್ರಮಾಣಗಳಿಗೆ ವಿಷಯವಾಗುವದಕ್ಕೆ ಕಾರಣಗಳಾದ ಧರ್ಮಗಳು ಇಲ್ಲವಾದುದರಿಂದ ಅದ್ವೈತಬ್ರಹ್ಮನು ಪ್ರಮಾಣ ಸಾಮಾನ್ಯಗಳಿಗೆ ವಿಷಯನಲ್ಲವಾದುದರಿಂದ ಬೌದ್ಧರ ವಿಜ್ಞಾನದಂತೆ ಶೂನ್ಯದಂತೆ ವೇದಾಂತಗಳಿಂದ ಅ ಜ್ಞೆಯನೆ (ತಿಳಿಯುವದಕ್ಕೆ ಅಯೋಗ್ಯನೆ.)

ಜೋರ್ಜ್. ಮಿಸ್ಟರ್ ಹರಿಹರಶರ್ಮಾ ಈವಿಷಯವನ್ನು ವಿಚಾರಮಾಡಿರಿ.

ಪ್ರ. ವ. ಹಾಗೆ ಆಗಲಿ! ಮಹಾಪ್ರಭೋ!

ಪ್ರ. ವ. ಆಚಾರ್ಯರೇ! ಬ್ರಹ್ಮನು ಪ್ರತ್ಯಕ್ಷದಿಂದ ಯಾಕೆ ತೋರುವದಿಲ್ಲ?

ವಾ. ವಿ. ಪ್ರತ್ಯಕ್ಷ (ಕಣ್ಣು ಮೊದಲಾದ ಇಂದ್ರಿಯ) ಗಳಿಂದ ತೋರಬೇಕಾದರೆ ಆಪದಾರ್ಥದಲ್ಲಿ ರೂಪ (ಬಣ್ಣ) ಮುಂತಾದ್ದು ಇರಬೇಕು. ಅದ್ವೈತರು ಹೇಳುವ ಬ್ರಹ್ಮನಲ್ಲಿ ಬಣ್ಣ (ರೂಪ) ಮುಂತಾದ ಧರ್ಮಗಳು ಇಲ್ಲವಾದ ಪ್ರಯುಕ್ತ ಪ್ರತ್ಯಕ್ಷದಿಂದ ತೋರುವದಿಲ್ಲ.

ಪ್ರ. ವ. ಅನುಮಾನದಿಂದ ಯಾಕೆ ತೋರಬಾರದು?

ವಾ.ದಿ. "ನೈಷಾತರ್ಕೇಣ ಮತಿರಾಪನೇಯಾ" ಎಂಬ ಕಾಠಕ ಮೊದಲಾದ ಶ್ರುತಿಗಳಲ್ಲಿ ಬ್ರಹ್ಮನು ಅನುಮಾನಕ್ಕೆ ವಿಷಯನಲ್ಲೆಂತ ಹೇಳಿದೆ, ಹಾಗೆ ಅನುಮಾನವು ಧರ್ಮವುಳ್ಳ ಪದಾರ್ಥವನ್ನೇ ತಿಳಿಸಿಕೊಡುತ್ತದೆ. ಯಾವ ಧರ್ಮವನ್ನೂ ಅದ್ವೈತಿಗಳು ಬ್ರಹ್ಮನಲ್ಲಿ ಅಂಗೀಕಾರಮಾಡದೆ ಇದ್ದ ಪ್ರಯುಕ್ತ ಅದ್ವೈತಿಗಳು ಹೇಳುವ ಬ್ರಹ್ಮನು ಅನುಮಾನಕ್ಕೆ ವಿಷಯನಾಗುವದಿಲ್ಲ.

ಪ್ರ. ವಾ. ವೇದ ಮೊದಲಾದ ಶಬ್ದಪ್ರಮಾಣಗಳಿಂದ ಬ್ರಹ್ಮನು ಯಾಕೆ ತೋರ ಬಾರದು.

ವಾ. ಎ. ಶಬ್ದದಿಂದ ಅರ್ಥವು ತೋರುವದು ಎರಡು ರೀತಿಯಾಗಿದೆ. ವಂದೇ ಪದದಿಂದ ತೋರುವದು, ಅನೇಕಪದ (ವಾಕ್ಯ) ಗಳಿಂದ ತೋರುವದು. ಒಂದೇಪದದಿಂದ ತೋರುವದಾದರೂ ರೂಢಶಕ್ತಿಯಿಂದ, ಯೋಗ ಶಕ್ತಿಯಿಂದ ಎಂದು ಎರಡುರೀತಿಯಾಗಿದೆ, ಉದಾಹರಣವು. ಘಟವು (ಕೊಡವು) ಘಟ ಎಂಬ ವಂದೇ ಪದದಿಂದ ರೂಢಶಕ್ತಿಯಿಂದಾ ತೋರುತ್ತದೆ. ಪಂಕಜವೆಂಬ ಪದವು ತನ್ನಲ್ಲಿರುವ "ಪಂಕ" "ಜನಿ" "ಡ" ಈ ಅವಯುಗಳ ಅರ್ಥಗಳಿಂದ ಸಂಬದ್ಧವಾದ (ಪಂಕಜನಿಕರ್ತೃ) ಕೆಸರಿನಲ್ಲಿ ಹುಟ್ಟಿದ ಕಮಲರೂಪ ಅರ್ಥವನ್ನು ತಿಳಿಸುತ್ತದೆ. "ವಜ್ರಂ ಹಸ್ತೇ ಧತ್ತೆ" ಎಂಬ ವಾಕ್ಯವು ತನ್ನಲ್ಲಿ ಘಟಕವಾದ (ಸೇರಿದ) ವಜ್ರಶಬ್ದವು ದ್ವಿತೀಯಾವಿಭಕ್ತಿ, ಹಸ್ತಶಬ್ದವು ಸಪ್ತಮೀ ವಿಭಕ್ತಿ, ಡುಧಾಞ್ ಧಾತು ತಿಜ್ ಪ್ರತ್ಯಯ ಇವುಗಳ ಅರ್ಥಗಳಿಂದ ಸಂಬದ್ಧವಾದ ಹಸ್ತದಲ್ಲಿ ವಜ್ರವನ್ನುಧಾರಣಮಾಡಿದ ಇಂದ್ರನನ್ನು ತಿಳಿಸುತ್ತದೆ. ಪ್ರಕೃತದಲ್ಲಿ ಅದ್ವೈತಿಗಳು ಹೇಳುವ ಬ್ರಹ್ಮನು ವೇದದಲ್ಲಿರುವ ರೂಢಪದದಿಂದಾಗಲೀ ಯೌಗಿಕ ಪದದಿಂದಾಗಲೀ, ವಾಕ್ಯದಿಂದಾಗಲೀ ತಿಳಿಯಲು ಶಕ್ಯನಲ್ಲಾ.

ಪ್ರ. ವ. ಬ್ರಹ್ಮನು ರೂಢಪದದಿಂದ ಯಾಕೆ ತಿಳಿಯಲ್ಪಡುವದಿಲ್ಲಾ.

ವಾದಿ. ತಾವುಹೇಳುವ "ಇಂಗ್ಲೀಷ" ಶಬ್ದಗಳಿಂದ ನಮ್ಮಂಥ ವೈದಿಕರುಗಳಿಗೆ ಅರ್ಥಜ್ಞಾನವು ಆಗುವದೋ?

ಪ್ರ. ವಾ. ಶಬ್ದಗಳಿಂದ ಅರ್ಥಜ್ಞಾನವಾಗ ಬೇಕಾದರೆ, ಪೂರ್ವದಲ್ಲಿ ಈಶಬ್ದವು ಈ ಅರ್ಥವನ್ನು ಬೋಧನಮಾಡುತ್ತದೆಂಬ, ಜ್ಞಾನವು (ವ್ಯುತ್ಪತ್ತಿ)ಬೇಕು. ಈ "ಇಂಗ್ಲೀಷ" ಶಬ್ದವು ಇಂಥಾ ಅರ್ಥವನ್ನು ಹೇಳುತ್ತದ = ಈಅರ್ಥ ಇಂಥ ಇಂಗ್ಲೀಷು ಶಬ್ದದಿಂದ ಹೇಳಿಸಿಗೊಳಲ್ಪಡುತ್ತದೆ ಎಂಬ ಜ್ಞಾನವು ಇಲ್ಲದೆ ಇದ್ದ ಪ್ರಯುಕ್ತ ಇಂಗ್ಲೀಷು ಶಬ್ದದಿಂದ ಅರ್ಥಜ್ಞಾನವು ನಿಮಗೆ ಆಗುವದಿಲ್ಲ.

ವಾದಿ. ಈಪದವು ಇಂಥ ಅರ್ಥವನ್ನು ಹೇಳುತ್ತದೆ. ಈ ಅರ್ಥವು ಈಪದದಿಂದ ಹೇಳಿಸಿಗೊಳಲ್ಪಡುತ್ತದೆ. ಎಂಬ ಜ್ಞಾನವಾಗಬೇಕಾದರೆ, ಪೂರ್ವದಲ್ಲಿ ಆ ಅರ್ಥಜ್ಞಾನವು ಬೇಕಷ್ಟೇ?

ಪ್ರ. ವಾ. ಬೇಕು. ಪೂರ್ವದಲ್ಲಿ ಘಟವು (ಕೊಡವು) ಪ್ರತ್ಯಕ್ಷದಿಂದ ನೋಡಿದ್ದ ರೀನೆ ಈ ಕೊಡವು ಘಟಎಂಬ ಶಬ್ದದಿಂದ ಹೇಳಿಸಿಗೊಳಲ್ಪಡುತ್ತದೆಂದು

ದೊಡ್ಡವರ ಹೇಳಿಕೆ ಮುಂತಾದವುಗಳಿಂದ ಗೊತ್ತಾಗಿದ್ದ ಮನುಷ್ಯರಿಗೆ ಘಟವನ್ನು ತಾ ಎಂತ ಹೇಳಿದರೆ, ಆ ಘಟಶಬ್ದದಿಂದ (ಕೊಡದ) ಘಟದ ಜ್ಞಾನವು ಆಗುತ್ತದೆ. ಹಾಗೆಯೇ ಯಾವ ಶಬ್ದದಿಂದಾದರೂ ಒಂದು ಪದಾರ್ಥದ ಜ್ಞಾನವು ರೂಢಿಯಿಂದ ಆಗಬೇಕಾದರೆ, ಆಪದಾರ್ಥದ ಜ್ಞಾನವು ಪೂರ್ವದಲ್ಲಿರಬೇಕು.

ವಾದಿ. ಬ್ರಹ್ಮನ ಜ್ಞಾನವು ರೂಢಶಬ್ದದಿಂದ ಆಗಬೇಕಾದರೆ, ಪೂರ್ವದಲ್ಲಿ ಬ್ರಹ್ಮನಜ್ಞಾನವು ಬೇಕಷ್ಟೇ?

ಪ್ರ. ವಾ. ಪೂರ್ವದಲ್ಲಿ ಬ್ರಹ್ಮ ಜ್ಞಾನವು ಬೇಕು!

ವಾದಿ. ಬ್ರಹ್ಮಜ್ಞಾನವು ಪೂರ್ವದಲ್ಲಿ ಯಾತರಿಂದಾಗಬೇಕು.

ಪ್ರ. ವಾ. ಪ್ರತ್ಯಕ್ಷದಿಂದ, ಅನುಮಾನದಿಂದ, ಆಗುವದಿಲ್ಲಾದಕಾರಣ ಶಬ್ದದಿಂದಲೇ ಆಗಬೇಕು.

ವಾದಿ. ಆ ಶಬ್ದದಿಂದ ಬ್ರಹ್ಮಜ್ಞಾನವಾಗಬೇಕಾದರೆ, ಪೂರ್ವದಲ್ಲಿ ಶಬ್ದದಿಂದಲೇ ಬ್ರಹ್ಮಜ್ಞಾನವಾಗಿರಬೇಕು. ಪುನಃ ಆ ಶಬ್ದದಿಂದ ಬ್ರಹ್ಮಜ್ಞಾನವಾಗಬೇಕಾದರೆ ಪುನಃ ಶಬ್ದದಿಂದಲೇ ಬ್ರಹ್ಮಜ್ಞಾನವಾಗಬೇಕು. ಹೀಗೆ ಅನವಸ್ಥೆಯು ಬರುತ್ತದೆ. ಆದಪ್ರಯುಕ್ತ ರೂಢಶಬ್ದದಿಂದ ಬ್ರಹ್ಮಜ್ಞಾನವಾಗುವದು ಹೇಗೆ ಕೂಡುತ್ತದೆ? ಇದೇಪ್ರಕಾರ ಲಕ್ಷಣಾವೃತ್ತಿಯಿಂದಾಗಲೀ, ಗೌಣೀವೃತ್ತಿಯಿಂದಾಗಲೀ ಬ್ರಹ್ಮನ ಬೋಧವು ಬರಬೇಕಾದರೂ ಪೂರ್ವದಲ್ಲಿ ಬ್ರಹ್ಮನ (ಚಿತ್) ಜ್ಞಾನವು ಬೇಕು. ಆ ಬ್ರಹ್ಮನ ಜ್ಞಾನವೂ ಕೂಡ ಶಬ್ದದಿಂದೆ ಬರಬೇಕು. ಹೀಗೆ ಅನವಸ್ಥಾ ಬರುತ್ತದ್ದರಿಂದ ಬ್ರಹ್ಮಜ್ಞಾನವು ಪದದಿಂದ ರೂಢಶಕ್ತಿಯಿಂದಾಗಲೀ ಲಕ್ಷಣಾವೃತ್ತಿಯಿಂದಾಗಲೀ, ಗೌಣೀವೃತ್ತಿಯಿಂದಾಗಲೀ ಬರುವದಿಲ್ಲ.

ಪ್ರ. ವಾ. ಪದದಿಂದ ರೂಢಶಕ್ತಿಯಿಂದಾಗಲೀ, ಲಕ್ಷಣಾವೃತ್ತಿಯಿಂದಾಗಲೀ, ಗೌಣೀವೃತ್ತಿಯಿಂದಾಗಲೀ, ಬ್ರಹ್ಮಜ್ಞಾನವು ಬರಬೇಡ. ಆದರೂ ಯೋಗಿಕಪದದಿಂದ ಬ್ರಹ್ಮ ಜ್ಞಾನವು ಅಗುತ್ತದೆಂದು ಯಾಕೆ ಹೇಳಬಾರದು?

ವಾದಿ. ಪಂಕಜವೆಂಬ ಯೌಗಿಕಪದದಿಂದ ಪಂಕಜನಿಕರ್ತೃ (ಕೆಸರಿನಲ್ಲಿಹುಟ್ಟಿದ) ಎಂಬ ವಿಶಿಷ್ಟವಸ್ತುವೇ ತಿಳಿದು ಬರುತ್ತದೆ. ಅಖಂಡವಸ್ತುವು ತಿಳಿದು ಬರುವದಿಲ್ಲ. ಅದ್ವೈತಬ್ರಹ್ಮನು ವಿಶಿಷ್ಟವಸ್ತುವಲ್ಲ. ಅಖಂಡವಾದ

ವಸ್ತುವೆ ಆದುದರಿಂದ ಯೌಗಿಕ ಪದದಿಂದ ಅಖಂಡವಾದ = ವಿಶಿಷ್ಟ ವಾಗದೇ ಇರುವ ಬ್ರಹ್ಮನ ಜ್ಞಾನವು ಆಗುವದಿಲ್ಲ.

ಪ್ರ. ವಾ. ವಾಕ್ಯದಿಂದ ಬ್ರಹ್ಮನಜ್ಞಾನ ವಾಗಬಹುದಷ್ಟೋ ?

ವಾದಿ. ಯೌಗಿಕ ಪದಗಳಂತೆ ವಾಕ್ಯಗಳೂ ಕೂಡ ವಿಶಿಷ್ಟ ಪದಾರ್ಥಗಳನ್ನು ಬೋಧನಮಾಡುತ್ತವೆ. ಅದ್ವೈತ ಬ್ರಹ್ಮನು ಅಖಂಡನಾದವನು, (ವಿಶಿಷ್ಟ ನಾಗದೇ ಇರುವವನು) ಕಾರಣ ವಾಕ್ಯಗಳೂಕೂಡ ಅಖಂಡ ಬ್ರಹ್ಮ ನನ್ನು ಬೋಧನ ಮಾಡುವದಿಲ್ಲ. ಮತ್ತು ಶಬ್ದಗಳು, ದ್ರವ್ಯ, ಗುಣ, ಕ್ರಿಯಾ, ಜಾತಿ, ಭೇದ ಮುಂತಾದ ಧರ್ಮಗಳನ್ನು ನಿಮಿತ್ತವಾಗಿ ಕೊಂಡು ಪ್ರವೃತ್ತವಾಗುತ್ತವೆ. ಬ್ರಹ್ಮನಲ್ಲಿ ದ್ರವ್ಯವೂ, ಗುಣವೂ, ಕ್ರಿಯಾವೂ, ಜಾತಿಯೂ, ಭೇದವೂ ಮುಂತಾವ ಯಾವಧರ್ಮಗಳೂ ಇಲ್ಲವಾದುದರಿಂದ ಶಬ್ದಗಳು ಬ್ರಹ್ಮನನ್ನು ಮುಖ್ಯವೃತ್ತಿಯಿಂದ ಬೋಧನಮಾಡುವದಿಲ್ಲನೆಂದು ಶಂಕರಾಚಾರ್ಯರೇ "ಬೃಹದಾರಣ್ಯ ಭಾಷ್ಯದಲ್ಲಿ ಹೇಳಿದ್ದಾರಾದ ಪ್ರಯುಕ್ತ ಬ್ರಹ್ಮನನ್ನು, ಯಾವ ವೇದವೂ ಬೋಧನಮಾಡುವದಿಲ್ಲ, ಆದುದರಿಂದ ಅದ್ವೈತರ ಬ್ರಹ್ಮನು (ಜ್ಞಾನವು) ವೇದಾಂತವೇದ್ಯನು ಬೌದ್ಧರ ವಿಜ್ಞಾನವು, ಶೂನ್ಯವು. ವೇದಾಂತವೇದ್ಯ ವಲ್ಲಾದ ಪ್ರಯುಕ್ತ, ಬ್ರಹ್ಮನು ಶೂನ್ಯದಸೆಯಿಂದ, ವಿಜ್ಞಾನದಸೆ ಯಿಂದಾ ಭಿನ್ನನು (ಬೇರೆ)ಎಂಬುವದು ಹೇಗೆ ಕೂಡುತ್ತದೆ!

ಪ್ರ. ವಾ. ಉತ್ತರವಿಲ್ಲ.

ಪ್ರ. ಗ. ಆಚಾರ್ಯರೇ! ಬೌದ್ಧರ ವಿಜ್ಞಾನವು ಅನೇಕವಾದದ್ದು ಕ್ಷಣಿಕವಾದದ್ದು ಅದ್ವೈತಿಗಳ ವಿಜ್ಞಾನವು (ಬ್ರಹ್ಮ) ಒಂದು ಮತ್ತು ನಿತ್ಯವಾದದ್ದೆಂಬ ಅಂಶದಲ್ಲಿ ಅದ್ವೈತಮತಕ್ಕೂ ಬೌದ್ಧಮತಕ್ಕೂ ಭೇದ ಉಂಟಷ್ಟೇ?

ವಾದಿ. ಆ ಅಂಶದಲ್ಲಿಯೂ ಭೇದವಿಲ್ಲ.

ಪ್ರ. ವಾ. ಬೌದ್ಧರು, ಜ್ಞಾನವು ನಿತ್ಯ ಮತ್ತು ಒಂದು ಎಂತ ಒಪ್ಪಿದರೆ ಅದ್ವೈತ ಮತವೂ, ಬೌದ್ಧಮತವೂ ಒಂದು ಆಗುವದು. ಅಥವಾ ಅದ್ವೈತಿಗಳು ಜ್ಞಾನವು (ಬ್ರಹ್ಮನು) ಕ್ಷಣಿಕವೆಂತ ಅನೇಕವೆಂತ ಒಪ್ಪಿದರೆ ಎರಡೂ ಮತಗಳು ಒಂದಾಗುವದು, ಹೀಗೆ ಇಬ್ಬರೂ ಒಪ್ಪದಿದ್ದಮೇಲೆ ಎರಡು ಮತಗಳು ಒಂದೇ ಹೇಗೆ ಆಗುವವು.

ವಾವಿ. ವಿಜ್ಞಾನವಾದಿ ಬೌದ್ಧರಲ್ಲಿ ಜ್ಞಾನವು ನಿತ್ಯವೆನ್ನುವವರೂ ಮತ್ತು ಅನಿತ್ಯವೆನ್ನುವವರೂ ಎಂದು ಎರಡು ಪ್ರಭೇದಗಳುಂಟು. ಆದುದರಿಂದಾ ಜ್ಞಾನವು ನಿತ್ಯವೆಂದು ಹೇಳುವ ಬೌದ್ಧಮತವು ಅದ್ವೈತಮತವು ಒಂದೇ ಆಗುತ್ತದೆ.

ಪ್ರ. ಗ. ಬೌದ್ಧರು ನಿತ್ಯಜ್ಞಾನವನ್ನು ಒಪ್ಪಿಕೊಂಡಿದ್ದಾರೆಂಬುವದಕ್ಕೆ ಏನು ಆಧಾರವು?

ವಾ. ವಿ. ನಿಮ್ಮ ಅದ್ವೈತಗ್ರಂಥಗಳು ಬೌದ್ಧರ ಗ್ರಂಥಗಳು ಇವೇ ಆಧಾರವು.

ಪ್ರ. ಗ. ಅದ್ವೈತಗ್ರಂಥಗಳನ್ನು ಹೇಳಿರಿ.

ವಾ. ವಿ. ಇದು ಯಾವಗ್ರಂಥವು ನೋಡಿರಿ?

ಪ್ರ. ಗ. ನಮ್ಮ ಶಂಕರಭಾಷ್ಯವು ಅದಕ್ಕೆ ವ್ಯಾಖ್ಯಾನವಾದ ಭಾಮತಿ ಎಂಬ ಗ್ರಂಥವು ವಾಚಸ್ಪತಿ ಎಂಬುವರು ಮಾಡಿದ್ದು.

ವಾ, ವಿ. † ಈವಾಕ್ಯಗಳನ್ನು ಓದಿ ಅಭಿಪ್ರಾಯವನ್ನು ಹೇಳಿರಿ.

ಪ್ರ. ಗ. "ಸರ್ವಥಾನುಪಪತ್ತೇಶ್ಚ" (ಬ್ರ. ಸೂ. ೨-೨-೩೨) ಎಂಬ ಸೂತ್ರ ವ್ಯಾಖ್ಯಾನದಲ್ಲಿ ಬೌದ್ಧಮತವನ್ನು ವಿಚಾರಮಾಡುವದಕ್ಕೆ ಪ್ರಾರಂಭಿಸಲು ಶಬ್ದದೋಷಗಳು ಅರ್ಥದೋಷಗಳು, ಸಿಕ್ಕಿ, ಆ ಬೌದ್ಧಮತವು ಉಸುಬಿನ ಭಾವಿಯಂತೆ ನಷ್ಟವಾಗುತ್ತದೆ ಎಂದು ಶಂಕರಾಚಾರ್ಯರು ಹೇಳಿದ್ದಕ್ಕೆ ಭಾಮತಿಯಲ್ಲಿ ಅರ್ಥದೋಷಗಳನ್ನು ತಿಳಿಸುವದಕ್ಕಾಗಿ ಬೌದ್ಧರು ಆತ್ಮಾ ಇಲ್ಲವೆಂದು ಒಪ್ಪಿಕೊಂಡು ಆಲಯವಿಜ್ಞಾನವು (ಆತ್ಮಾ) ಸಮಸ್ತ ವಾಸನಾಗಳಿಗೆ ಆಧಾರವೆಂತ ಹೇಳುತ್ತ ನಿತ್ಯವಾದ ಆತ್ಮನು (ಆಲಯ ವಿಜ್ಞಾನವು) ಉಂಟೆಂದು ಒಪ್ಪುತ್ತಾರೆ. ಆದ್ದರಿಂದ ವ್ಯಾಹತ ಭಾಷಿಯು ಎಂದು ಹೇಳಿದ್ದಾರೆ.

---

† ಯಥಾಯಥಾಯಂ ವೈನಾಶಿಕ ಸಮಯ ಉಪಪತ್ತಿಮತ್ತಾಯಪರೀಕ್ಷ್ಯತೇ ತಥಾತಥಾ ಸಿಕತಾಕೂಪವದ್ವಿದೀರ್ಯತ ಏವ ನಕಾಂಚಿ ದಸ್ಯತ್ರೋಪಪತ್ತಿಂ ಪಶ್ಯಾಮಃ (ಶಾ. ಭಾ.)

ಅರ್ಥತಶ್ಚ ನೈರಾತ್ಮ್ಯಮಭ್ಯುಪೇತ್ಯಾಲಯ ವಿಜ್ಞಾನಂ ಸಮಸ್ತವಾಸನಾಧಾರ ಮಭ್ಯುಪಗಚ್ಛನ್ನ ಸ್ಥಿರಮಾತ್ಮಾನ ಮಭ್ಯುಪೈತಿ (ಭಾಮತಿ) ಅಕ್ಷರಂ ಅವಿನಾಶಿನಂ.

ವಾದಿ. ಈಗ್ರಂಥದಿಂದ ಬೌದ್ಧನು ವಿಜ್ಞಾನವು ನಿತ್ಯವೆಂದು ಒಪ್ಪಿತ್ತಾನೆಂಬುವದು ಸಿದ್ಧಿಸುತ್ತದೆಯೋ, ಇಲ್ಲವೋ?

ಪ್ರ. ವಾ. ಉತ್ತರವಿಲ್ಲಾ.

ವಾದಿ. ಈಗ್ರಂಥ ಯಾವದು?

ಕೋರ್ಟ. ಆಚಾರ್ಯರೇ! ಎಷ್ಟುಗ್ರಂಥಗಳನ್ನು ವಿಚಾರಮಾಡುತ್ತೀರಿ? ಸಾಕು, ಮುಗಿಸರಿ.

ವಾ. ವಿ. (ಕೋರ್ಟಿಗೆ) ಮಹಾಪ್ರಭುಗಳೇ! ಬೌದ್ಧರ ವಿಜ್ಞಾನವು ನಿತ್ಯವಾದದ್ದು ಎಂಬ ವಿಷಯದಲ್ಲಿ ಇನ್ನೂ ಅನೇಕ ಆಧಾರಗಳುಂಟೆಂಬ ವಿಷಯುವನ್ನು ತಿಳಿಸಬೇಕಾಗಿ ವಿಚಾರ ಮಾಡುತ್ತಿದ್ದೇನೆ. ಬೇಡೆಂದರೆ ಬಿಡುತ್ತೇನೆ, ಬೇಕಾದಾಗ್ಗೆ ಅಪ್ಪಣೆ ಕೊಡಬೇಕು. ಬೇರೆ ವಿಷಯುವನ್ನು ವಿಚಾರ ಮಾಡುತ್ತೇನೆ. ಅಪ್ಪಣೆ ಯಾಗಬೇಕು.

ಕೋರ್ಟ. ಎಸ್.

ವಾ. ವಿ. ನಿಮ್ಮ ಬ್ರಹ್ಮನು ಸವಿಶೇಷನೋ? (ಧರ್ಮಗಳಿಂದ ಯುಕ್ತನೋ) ಅಥವಾ ನಿರ್ವಿಶೇಷನೋ (ಸಕಲ ಧರ್ಮಗಳಿಂದ ರಹಿತನೋ)?

ಪ್ರ. ಗ. ನಮ್ಮ ಮತದ ಪ್ರಕಾರ ಬ್ರಹ್ಮನು ಸಕಲಧರ್ಮರಹಿತನು.

ವಾ. ವಿ. ಸಕಲಧರ್ಮರಹಿತನು ಎಂತ ಹೇಗೆ ಗೊತ್ತಾಯಿತು?

ಪ್ರ. ಗ. ನಮ್ಮ ಶಂಕರ ಭಗವತ್ಪಾದರ (೧) ಸಹಸ್ರನಾಮಭಾಷ್ಯ (೨) ಬೃಹದಾರಣ್ಯಕಭಾಷ್ಯ (೩) ಬ್ರಹ್ಮಸೂತ್ರಭಾಷ್ಯ ಇವುಗಳಿಂದ ಬ್ರಹ್ಮನು ನಿರ್ವಿಶೇಷನು = ನಾಮ, ರೂಪ, ಕರ್ಮ, ಭೇದ, ಜಾತಿ, ಗುಣ ಇವೇ ಮೊದಲಾದ ಸಕಲ ಧರ್ಮರಹಿತನು ಎಂದು ಗೊತ್ತಾಯಿತು.

ವಾ. ವಿ. ಬೌದ್ಧರ ವಿಜ್ಞಾನವು ನಿರ್ವಿಶೇಷವೋ, (ಸಕಲ ಧರ್ಮರಹಿತವೋ) ಸವಿಶೇಷವೋ?

---

೧. ನಿರ್ವಿಶೇಷತ್ವಾತ್ ಶೂನ್ಯವತ್ ಶೂನ್ಯಃ

೨. ಯಸ್ಮಿನ್ ನ ಕಶ್ಚಿದ್ವಿಶೇಷೋಽಸ್ತಿ ನಾಮವಾ, ರೂಪಂವಾ, ಕರ್ಮವಾ, ಜಾತಿರ್ವಾ, ಗುಣೋವಾ

೩. ಸಮಸ್ತ ವಿಶೇಷರಹಿತಂ ನಿರ್ವಿಕಲ್ಪಕಮೇವ ಬ್ರಹ್ಮ ಪ್ರತಿಪತ್ತವ್ಯಂ ನತದ್ವಿಪರೀತಂ

ಪ್ರ. ಗ. ಬೌದ್ಧರ ವಿಜ್ಞಾನವು ನಿರ್ವಿಶೇಷವೇ (ಸಕಲ ಧರ್ಮರಹಿತವೇ).

ವಾ. ವಿ. ಶಾಸ್ತ್ರಿಗಳೇ! ನಿಮ್ಮಿಬ್ಬರಮತದಲ್ಲಿ ಅಂಗೀಕರಿಸಿರುವ ಜ್ಞಾನವು ನಿರ್ವಿಶೇಷವು (ಸಕಲ ಧರ್ಮರಹಿತವು) ಆದಮೇಲೆ, ಬೌದ್ಧರ ಜ್ಞಾನದಲ್ಲಿ ಕ್ಷಣಿಕತ್ವವೆಂಬ ಧರ್ಮಉಂಟೇ? ಅದ್ವೈತಿಗಳ ಜ್ಞಾನದಲ್ಲಿ ನಿತ್ಯತ್ವವೆಂಬ ಧರ್ಮಉಂಟೇ

ಪ್ರ. ಗ. ಅದ್ವೈತಿಗಳ ಜ್ಞಾನದಲ್ಲಿ ನಿತ್ಯತ್ವವೆಂಬ ಧರ್ಮವು ಇಲ್ಲ. ಬೌದ್ಧರ ವಿಜ್ಞಾನದಲ್ಲಿ ಕ್ಷಣಿಕತ್ವವೆಂಬ ಧರ್ಮವೂ ಇಲ್ಲ.

ವಾದಿ. ಕ್ಷಣಿಕತ್ವ ಧರ್ಮವು ಬೌದ್ಧರ ಜ್ಞಾನದಲ್ಲಿ ಇಲ್ಲ, ನಿತ್ಯತ್ವ ನಿಮ್ಮ ಜ್ಞಾನ (ಬ್ರಹ್ಮ) ದಲ್ಲಿ ಇಲ್ಲ, ಅಂದಮೇಲೆ "ಕ್ಷಣಿಕತ್ವ, ನಿತ್ಯತ್ವವೆಂಬ ಧರ್ಮಗಳಿರುವದರಿಂದ ಭೇದ ಉಂಟೆಂದು" ಹೇಳುವದು ಹೇಗೆ ಕೂಡುವದು ಕೂಡುವದಿಲ್ಲವಷ್ಟೇ?

ಪ್ರ. ಗ. ಆಚಾರ್ಯರೇ! ನಮ್ಮಜ್ಞಾನದಲ್ಲಿ ನಿತ್ಯತ್ವವೆಂಬ ಧರ್ಮವಿಲ್ಲದಿದ್ದರೂ, ನಿತ್ಯತ್ವವು ಜ್ಞಾನದ ಸ್ವರೂಪವಾಗಿದೆ, ಬೌದ್ಧರ ಜ್ಞಾನದಲ್ಲಿ ಕ್ಷಣಿಕತ್ವವಿಲ್ಲದಿದ್ದರೂ ಕ್ಷಣಿಕತ್ವವು ಬೌದ್ಧರ ಜ್ಞಾನಸ್ವರೂಪವಾಗಿದೆ, ಎಂದು "ಸ್ಥೈರ್ಯಂ ಸ್ವರೂಪಾತ್ಮಕಂ ಚೈತನ್ಯಸ್ಯಚ ಭಂಗುರತ್ವ ಮಿವಮೇ ಸರ್ವಸ್ಯತಿ ದರ್ಶನೇ" (ಸಂಕ್ಷೇಪ ಶಾ ೨-೩೧) ಎಂದು ಸಂಕ್ಷೇಪಶಾರೀರಕದಲ್ಲಿ ಹೇಳಿದ್ದಾರಾದಕಾರಣ ನಮ್ಮ ವಿಜ್ಞಾನಕ್ಕೂ ಬೌದ್ಧರ ವಿಜ್ಞಾನಕ್ಕೂ ಭೇದವು ಬರುತ್ತದೆ.

ವಾ. ವಿ. "ಭಟ್ಟಸ್ಯ ಕಟ್ಯಾಂ ಸರಟಃ ಪ್ರವಿಷ್ಟಃ"=ನಮ್ಮ ಆಚಾರ್ಯರ ಟೊಂಕದಲ್ಲಿ (ಕಟಿಪ್ರದೇಶದಲ್ಲಿ) ಸರಟವು (ಜತಿಕಾಟವು) ಪ್ರವೇಶಮಾಡಿತು. ಅಂದಕೂಡಲೇ, ವಿಚಾರಸೀಲನಾದ ಶಿಷ್ಯನು "ಛಿದ್ರಾಭಾವಾತ್ಕಥಂ ಪ್ರವೇಶಃ" = ಕಟಿಪ್ರದೇಶದಲ್ಲಿ ಚಿದ್ರವೇಇಲ್ಲ, ಸರಟವು ಹೇಗೆ ಪ್ರವೇಶ ಮಾಡುತ್ತದೆ ಎಂದು, ನಕ್ಕುಬಿಟ್ಟನು. ಮತ್ತೊಬ್ಬ ಮೂಢಶಿಷ್ಯನು, ಅಯ್ಯೋ! ನಮ್ಮ ಆಚಾರ್ಯರ ಕಟಿಭಾಗದಲ್ಲಿ ಸರಟವು ಪ್ರವೇಶ ಮಾಡಿತು ಎಂತ ರೋದನ ಮಾಡಹತ್ತಿದನು ಎಂದು ಪ್ರಾಚೀನರು ಕಥೆಯನ್ನು ಹೇಳುತ್ತಾರೆ. ತಾವು ವಿಚಾರಸೀಲನಾದ ಶಿಷ್ಯನಂತೆ ವಿಚಾರ ಮಾಡಬೇಕು, ಮೂಢಶಿಷ್ಯನಂತೆ ವಿಚಾರಮಾಡದೆ ಹೇಳಿದ್ದನ್ನೆಲ್ಲ ಒಪ್ಪಬಾರದು,

ಪ್ರ. ವಾ. ಸಂಕ್ಷೇಪ ಶಾರೀರಕಕಾರರು ಹೇಳಿದ್ದರಲ್ಲಿ ಏನು ಅನುಪಪತ್ತಿಗಳುಂಟು

ವಾದಿ. ಸಕಲಕಾಲವೃತ್ತಿತ್ವಂ ಎಂಬ ಅನೇಕ ಪಾರ್ಥಗಳಿಂದ ಕೂಡಿದ ನಿತ್ಯತ್ವವು, ಅನೇಕ ಪದಾರ್ಥಗಳಿಂದ ಕೂಡದೇ ಇರುವ ಅಖಂಡವಾದ ಬ್ರಹ್ಮನ ಸ್ವರೂಪವು ಹ್ಯಾಗೆ ಆಗೋದು? ಒಂದೇ ಕ್ಷಣದಲ್ಲಿ ಇರೋಣ ಎಂಬ ಅನೇಕ ಪದಾರ್ಥಗಳಿಂದ ಯುಕ್ತವಾದ ಕ್ಷಣಿಕತ್ವವು ಯಾವ ಪದಾರ್ಥಗಳಿಂದಲೂ ಕೂಡದೇ ಇರುವ, ಅಖಂಡವಾದ ಜ್ಞಾನದ ಸ್ವರೂಪವು ಆಗುವದು ಹೇಗೆ ಎಂಬುವದನ್ನು ವಿಚಾರಮಾಡದಲೆ "ಕ್ಷಣಿಕತ್ವವು ಬೌದ್ಧರ ಜ್ಞಾನಸ್ವರೂಪವು, ನಿತ್ಯತ್ವವು ಅದ್ವೈತಿಗಳ ಜ್ಞಾನ (ಬ್ರಹ್ಮ) ಸ್ವರೂಪವು, ಆದಕಾರಣ, ಅವುಗಳಿಗೆ ಭೇಧಗಳು ಕೂಡುತ್ತವೆ" ಎಂಬುವದು ಹೇಗೆ ಯುಕ್ತವಾಗುತ್ತದೆ?

ಪ್ರ. ವಾ. ಉತ್ತರವಿಲ್ಲಾ.

ಪ್ರ. ಪ. ಕ್ಷಣಿಕತ್ವ ನಿತ್ಯತ್ವ, ವಿಷಯದಲ್ಲಿ ಭೇದವು ಬರಬೇಡ, ಅದ್ವೈತಬ್ರಹ್ಮ=ಜ್ಞಾನವು ಏಕತ್ವ ಉಳ್ಳದ್ದು (ಒಂದೇ ಆದದ್ದು) ಬೌದ್ಧರ ವಿಜ್ಞಾನವು ಅನೇಕತ್ವ ಉಳ್ಳದ್ದು. (ಅನೇಕ ವಾದದ್ದು). ಆದುದರಿಂದ ಅವುಗಳಿಗೆ ಭೇದವು ಬರುತ್ತದಷ್ಟೇ?

ವಾ. ವಿ. ಶಾಸ್ತ್ರಿಗಳೇ! ಅದ್ವೈತಿಗಳು ಹೇಳುವ ಜ್ಞಾನ=(ಬ್ರಹ್ಮ)ವೂ ಬೌದ್ಧರು ಹೇಳುವ ಜ್ಞಾನವು ನಿರ್ವಿಶೇಷ (ಸಕಲ ಧರ್ಮರಹಿತ) ವಾದುದರಿಂದ ಅದ್ವೈತಿಗಳ ಜ್ಞಾನದಲ್ಲಿ ಏಕತ್ವವು ಇಲ್ಲ, ಬೌದ್ಧರ ಜ್ಞಾನವಲ್ಲಿ ಬಹುತ್ವವು ಇಲ್ಲ, ಆದ್ದರಿಂದ ಈ ಏಕತ್ವ ಬಹುತ್ವಗಳಿಂದ ಬೌದ್ಧಾದ್ವೈತಿಗಳ ವಿಜ್ಞಾನಗಳಿಗೆ ಭೇದವು ಬರುವದಿಲ್ಲ, ನಿರ್ವಿಶೇಷವಾದಕಾರಣ ಭೇದವು ಇಲ್ಲಾ.

ಪ್ರ. ವಾ. ಅದ್ವೈತಿಗಳು ಏಕತ್ವವನ್ನು ಬ್ರಹ್ಮನಲ್ಲಿ ಒಪ್ಪಲಿಲ್ಲಾ ಎಂಬುವ ವಿಷಯದಲ್ಲಿ ಯೇನು ಆಧಾರ ಉಂಟು?

ವಾದಿ. ಶಾಸ್ತ್ರಿಗಳೇ ಬ್ರಹ್ಮನು ನಿರ್ವಿಶೇಷ (ಸಕಲ ಧರ್ಮರಹಿತ) ಎಂದು ಹೇಳೋಣದರಿಂದ, ಏಕತ್ವಧರ್ಮವು ಇಲ್ಲವೆಂದು ಸಿದ್ಧಿಸುವದಿಲ್ಲವೇ? ಅದಲ್ಲದೆ ಶಂಕರಾಚಾರ್ಯರ ಗ್ರಂಥವು, ಅದಕ್ಕೆ ಮಧುಸೂದನ ಸರಸ್ವತಿಗಳುಮಾಡಿದ ವ್ಯಾಖ್ಯಾನವಾದ ಸಿದ್ಧಾಂತ ಬಿಂದು, ಇವೇ ಮೊದಲಾದ ಅನೇಕ ಗ್ರಂಥಗಳು ಆಧಾರವಾಗಿ ಇರುವವು.

ಪ್ರ. ವಾ. ಶಂಕರಾಚಾರ್ಯರ ವಾಕ್ಯಯಾವದು, ಅದನ್ನು ತೋರಿಸಬೇಕು.

ವಾದಿ. • ಈ ವಾಕ್ಯವನ್ನೂ ಇದರ ವ್ಯಾಖ್ಯಾನವನ್ನೂ ಓದಿ ತಾವೇ ಅಭಿಪ್ರಾಯವನ್ನು ಹೇಳಬೇಕು.

ಪ್ರ. ವಾ. "ಏಕಮೇವಾದ್ವಿತೀಯಂ" ಎಂಬ ಶ್ರುತಿಯಲ್ಲಿ ಬ್ರಹ್ಮನಿಗೆ ಏಕತ್ವವು ಹೇಳಲ್ಪಟ್ಟಿದೆ. ಬ್ರಹ್ಮನಲ್ಲಿ ಏಕತ್ವವು ಇಲ್ಲವೆಂದು ಹ್ಯಾಗೆ ಹೇಳುತ್ತೀರಿ ಎಂದು ಶಂಕೆ ಬರಲು "ನವಾಕೇವಲತ್ವಂ" ಎಂಬ ವಾಕ್ಯದಿಂದ ಏಕತ್ವವು ಅವಿದ್ಯಾಕಲ್ಪಿತ = ಸುಳ್ಳು ಆದಪ್ರಯುಕ್ತ, ಬ್ರಹ್ಮನಲ್ಲಿ ಏಕತ್ವವು ಇಲ್ಲಾ ಎಂತ ಶಂಕರಾಚಾರ್ಯರು ಹೇಳಿದ್ದಾರೆಂತ ಅಭಿಪ್ರಾಯವು.

ವಾದಿ. ಶಾಸ್ತ್ರಿಗಳೇ! ಶಂಕರಾಚಾರ್ಯರ ಈವಾಕ್ಯದಿಂದ ಬ್ರಹ್ಮ = ಜ್ಞಾನದಲ್ಲಿ ಅದ್ವೈತಮತದಪ್ರಕಾರ ಏಕತ್ವವು ಇಲ್ಲವೆಂದು ಸಿದ್ಧಿಸುತ್ತದೆಯೋ ಇಲ್ಲವೋ?

ಪ್ರ. ವಾ. ಏಕತ್ವವು ಬ್ರಹ್ಮ=ಜ್ಞಾನನಲ್ಲಿ ಅದ್ವೈತಮತದಪ್ರಕಾರ ಇಲ್ಲವೆಂದು ಸಿದ್ಧಿಸುತ್ತದೆ.

ವಾದಿ. ಬೌದ್ಧರು ಜ್ಞಾನಕ್ಕೆ ನಿರ್ವಿಶೇಷತ್ವ, (ಸಕಲಧರ್ಮರಾಹಿತ್ಯ) ವನ್ನಾ ಒಪ್ಪುವದರಿಂದ ನಾನಾತ್ವವನ್ನಾ=ಅನೇಕತ್ವಧರ್ಮವನ್ನಾ ಒಪ್ಪುತ್ತಾರೋ ಇಲ್ಲವೋ?

ಪ್ರ. ವಾ. ವಾಸ್ತವವಾದ ಅನೇಕತ್ವಧರ್ಮವನ್ನಾ ಒಪ್ಪುವದಿಲ್ಲ, ಅನೇಕತ್ವವು ಕಲ್ಪಿತವೇ.



ವಾದಿ. ಅದ್ವೈತರ ಬ್ರಹ್ಮ=ಜ್ಞಾನದಲ್ಲಿ ನಿತ್ಯತ್ವವೂ ಏಕತ್ವವೂ ಇಲ್ಲ. ಬೌದ್ಧರ ವಿಜ್ಞಾನದಲ್ಲಿ ಕ್ಷಣಿಕತ್ವವೂ ಅನೇಕತ್ವವೂ ಇಲ್ಲವೆಂದಮೇಲೆ ಬೌದ್ಧರ ವಿಜ್ಞಾನಕ್ಕೂ ಅದ್ವೈತಿಗಳ ವಿಜ್ಞಾನಕ್ಕೂ ಭೇದವು ಉಂಟೆಂದು ಹೇಳುವದು ಹೇಗೆ ಕೂಡುತ್ತದೆ?

ಪ್ರ. ವಾ. "ಚೋದ್ಯಂವಾ ಪರಿಹಾರೋವಾ ಕ್ರಿಯತಾಂ ದ್ವೈತಭಾಷಯಾ" ಎಂದು ಹೇಳಿದಪ್ರಕಾರ ದ್ವೈತಮತದಲ್ಲೇ ಶಂಕೆಗಳು, ಉತ್ತರಗಳು

---

• ನನು ಏಕಮೇವಾದ್ವಿತೀಯಮಿತಿ ಶ್ರುತ್ಯಾ ಏಕತ್ವಂ ಪ್ರತಿಪಾದ್ಯತೆ ನೇತ್ಯಾಹ। ನವಾ ಕೇವಲತ್ವಮಿತಿ। ಕೇವಲತ್ವಂ ಏಕತ್ವಂ ತಸ್ಯಾವಿದ್ಯಕತ್ವಾತ್

(ದಶಶ್ಲೋಕೀ)



ಹೇಳುವದು ಉಂಟೇ ಹೊರತು, † ದ್ವೈತವು ಅದ್ವೈತವು ಇಲ್ಲದೇ ಇರುವ ನಮ್ಮಂಥವರಿಗೆ ಈ ಮಿಥ್ಯಾ ವಿಚಾರವು ಅಪೇಕ್ಷಿತವಲ್ಲ, ಭ್ರಾಂತರೇ ಈ ವಿಚಾರಮಾಡತಕ್ಕದ್ದು. ನಮ್ಮಂಥ ಪಂಡಿತರು ಪಾಷಾಣದಂತೆ ಸುಮ್ಮನೇ ಇರತಕ್ಕದ್ದು ಎಂತ ನಮ್ಮ ಶಂಕರ ಭಗವತ್ಪಾದರು ಹೇಳಿರೋಣದರಿಂದ, ನಾವು ನಿಮ್ಮ ಸಂಗಡ ಯಾವವಿಚಾರವೂ ಮಾಡುವದಿಲ್ಲ. ನಿಮ್ಮ ಯಾವ ಪ್ರಶ್ನಗಳಿಗೂ ಉತ್ತರಕೊಡದೆ ಪಾಷಾಣದಂತೆ ಸುಮ್ಮನೇ ಕೂಡುತ್ತೇವೆ.

## ವಾದಿವಕೀಲರ ಆರ್ಗ್ಯುಮೆಂಟ.

ಮತಗಳು ಭಿನ್ನವಾಗಬೇಕಾದರೆ ಆ ಮತಗಳಲ್ಲಿ ಹೇಳಲ್ಪಡುವ ತತ್ವಗಳು ಬೇರೆ ಬೇರೆ ಆಗಿರಬೇಕು. ಅದ್ವೈತಿಗಳು ಹೇಳುವ ತತ್ವಗಳು ಶೂನ್ಯವಾದಿಗಳಾದ ಬೌದ್ಧರು ಹೇಳುವ ತತ್ವಗಳು ಒಂದೇ ಆದ್ದರಿಂದ ಅದ್ವೈತಮತವು ಶೂನ್ಯವಾದಿಗಳಾದ ಬೌದ್ಧರಮತವೇ.

| ಅದ್ವೈತಿಗಳ ತತ್ವಗಳು. | ಬೌದ್ಧರ ತತ್ವಗಳು. |
|---|---|
| ೧. ಬ್ರಹ್ಮನೊಬ್ಬನು ಸತ್ಯನು. | ೧. ಶೂನ್ಯವೊಂದು ಸತ್ಯವು. |
| ೨. ಆ ಬ್ರಹ್ಮನಲ್ಲಿ ಸಮಸ್ತ ಜಗತ್ತು ಅಜ್ಞಾನದಿಂದ ಕಲ್ಪಿತವು. ಸ್ವಪ್ನದಂತೆ ಶುಕ್ತಿರಜತದಂತೆ ಶಶವಿಷಾಣದಂತೆ ಸುಳ್ಳಾದದ್ದು. | ೨. ಆ ಶೂನ್ಯದಲ್ಲಿ ಸಮಸ್ತ ಜಗತ್ತು ಅಜ್ಞಾನದಿಂದ ಕಲ್ಪಿತವು ಸ್ವಪ್ನದಂತೆ ಶುಕ್ತಿರಜತದಂತೆ, ಶಶವಿಷಾಣದಂತೆ ಸುಳ್ಳಾದದ್ದು. |
| ೩. ಅಹಂಬ್ರಹ್ಮ ಅಹಂಬ್ರಹ್ಮ ಎಂಬ ಉಪಾಸನಾಮಾಡಿ ಬ್ರಹ್ಮಭಾವರೂಪ ಮೋಕ್ಷವನ್ನು ಹೊಂದತಕ್ಕದ್ದು. | ೩. ಅಹಂ ಶೂನ್ಯಂ ಅಹಂಶೂನ್ಯಂ ಎಂಬ ಉಪಾಸನಾಮಾಡಿ ಶೂನ್ಯಭಾವರೂಪ ಹೊಂದತಕ್ಕದ್ದು. |

† "ಕಿಂವಾಪೇಕ್ಷ್ಯಮಿಹಾಪಿ ಮಯ್ಯತಿತರಾಂ ಮಿಥ್ಯಾವಿಚಾರಾದಿಕಂ ದ್ವೈತಾದ್ವೈತ ವಿವರ್ಜಿತೇ ಸಮರಸೇಮೌನಂ ಪರಂ ಸಮ್ಮತಂ (ಪ್ರೌಢಾನುಭೂತಿ ೧೧)

ಮಿಥ್ಯಾವಾದ ವಿಚಾರಚಿಂತನ ಮಹೋಕಾರ್ನಂತ್ಯದ್ರಷ್ಟಾತ್ಮಕಾಃ ಭ್ರಾಂತಾವಿವನಪಾರಗಾ ಧೃಢಧಿಯಸ್ತ್ವಾಕ್ಷ್ಮಿಣ್ಯಂ ಶಿಲಾವತ್ ಸ್ಥಿತಾಃ

ಈಪ್ರಕಾರ ಎರಡೂಮತಗಳ ತತ್ವಗಳು ಒಂದೇ ಆದ್ದರಿಂದ ಈ ಎರಡೂ ಮತಗಳಿಗೆ ಭೇಧವಿಲ್ಲವಾದಪ್ರಯುಕ್ತ ಈಅವೈದಿಕವಾದ ಅದ್ವೈತಮತವು ಅನರ್ಥಕ್ಕೆ (ದುಷ್ಟಫಲಕ್ಕೆ) ಕಾರಣವಾದದ್ದು ಆದ್ದರಿಂದ ಪ್ರತಿವಾದಿಗಳಾದ ಅದ್ವೈತಿಗಳು ಈಮತವನ್ನು ವೈದಿಕಮತವೆಂದು ಉಪದೇಶಮಾಡಬಾರದು. ವೈದಿಕರಾದ ಆಸ್ತಿಕಜನರು ಈ ಅದ್ವೈತಮತವನ್ನು ಆಶ್ರಯಿಸಬಾರದು. ಮೋಕ್ಷ ಮೊದಲಾದ ಪುರುಷಾರ್ಥಕ್ಕೆ ಸಾಧಕವಾದ ವೈದಿಕವಾದ ದ್ವೈತಮತವನ್ನೇ ಆಶ್ರಯಿಸಿ ಮೋಕ್ಷಮೊದಲಾದ ಪುರುಷಾರ್ಥಗಳನ್ನು ಹೊಂದತಕ್ಕದ್ದು ಎಂತ ನಿರ್ಣಯಮಾಡಿ ತಾಕೀತಕೊಡತಕ್ಕದ್ದು ಎಂದು ಪ್ರಾರ್ಥನೆ.

---

## ಪ್ರತಿವಾದಿ ವಕೀಲರ ಆರ್ಗ್ಯುಮೆಂಟ.

---

ಜಗತ್ತು ಕಲ್ಪಿತವೆಂಬ ಅಂಶದಲ್ಲಿ ಅದ್ವೈತಮತಕ್ಕೂ ಶೂನ್ಯವಾದಿಗಳಾದ ಬೌದ್ಧರಮತಕ್ಕೂ ಸಾಮ್ಯವಿದ್ದಾಗ್ಯೂ ಇತರ ವಿಷಯಗಳಲ್ಲಿ ಭೇದಉಂಟು. ಆದಪ್ರಯುಕ್ತ ಅದ್ವೈತಮತವೂ ಬೌದ್ಧಮತವೂ ಒಂದೇ ಅಲ್ಲ (ಬೇರೆಆದದ್ದು)

| ಅದ್ವೈತಮತ ತತ್ವಗಳು. | ಶೂನ್ಯವಾದಿಗಳಾದ ಬೌದ್ಧರ ಮತ ತತ್ವಗಳು |
|---|---|
| ೧. ಬ್ರಹ್ಮನು ತತ್ವವು (ಸತ್ಯವು) ಜಗತ್ತಿನ ಭ್ರಮಕ್ಕೆ ಅಧಿಷ್ಠಾನವು. | ೧. ಶೂನ್ಯವು ತತ್ವವು (ಸತ್ಯವು) ಜಗತ್ತಿನ ಭ್ರಮಕ್ಕೆ ಅಧಿಷ್ಠಾನವು. |
| ೨. ಜಗತ್ತು ವ್ಯಾವಹಾರಿಕ ಸತ್ಯವು. | ೨. ಜಗತ್ತು ವ್ಯಾವಹಾರಿಕ ಸತ್ಯವಲ್ಲ. |
| ೩. ವೇದವು ಪ್ರಮಾಣವು. | ೩. ವೇದವು ಪ್ರಮಾಣವಲ್ಲ. |
| ೪. ಸ್ವರ್ಗಾದಿ ಪರಲೋಕ ಗಳುಂಟು ಅವಕ್ಕೆ ಸಾಧಕವಾದ ಪುಣ್ಯಕರ್ಮಗಳುಂಟು. | ೪. ಸ್ವರ್ಗಾದಿ ಪರಲೋಕಗಳು ಇಲ್ಲಾ. ಅದಕ್ಕೆ ಸಾಧಕವಾದ ಪುಣ್ಯಕರ್ಮಗಳು ಇಲ್ಲಾ. |
| ೫. ಅದ್ವೈತಿಗಳು ಆಸ್ತಿಕರು. | ೫. ಬೌದ್ಧರು ನಾಸ್ತಿಕರು. |
| ೬. ಶಂಕರಾಚಾರ್ಯರು ಬೌದ್ಧಮತವನ್ನು ಖಂಡನ ಮಾಡಿದ್ದಾರೆ. | ೬. ಬುದ್ಧರು ಬೌದ್ಧ ಮತವನ್ನು ಸ್ಥಾಪನಮಾಡಿದ್ದಾರೆ. |

ಇವೇ ಮೊದಲಾದ ವಿಷಯಗಳಲ್ಲಿ ಅದ್ವೈತಮತಕ್ಕೂ ಬೌದ್ಧಮತಕ್ಕೂ

ಭೇದ ಉಂಟಾದಕಾರಣ ಅದ್ವೈತಮತವು ಬೌದ್ಧಮತದಿಂದ ಬೇರೆ ಆದದ್ದು. ಎರಡೂ ಮತಗಳು ಒಂದೇ ಅಲ್ಲ. ಕೆಲವು ವಿಷಯಗಳಲ್ಲಿ ಅದ್ವೈತಮತಕ್ಕ್ಯಾ ಬೌದ್ಧಮತಕ್ಕ್ಯಾ ಸಾಮ್ಯ ಇದ್ದಮಾತ್ರಕ್ಕೆ ಎರಡೂ ಮತಗಳು ಒಂದಾಗು ವದಾದರೆ ಎಲ್ಲ ಮತಗಳಲ್ಲಿ ಇನ್ನೊಂದುಮತದ ತತ್ವಗಳಿಂದಾ ಕೆಲವು ಅಂಶಗಳಲ್ಲಿ ಸಾಮ್ಯವಿರೋಣದರಿಂದ ಎಲ್ಲಾಮತಗಳು ಒಂದೇ ಆಗಬೇಕಾಗು ವದು. ಹಾಗೆ ಒಪ್ಪುವದಂತೂ ಯುಕ್ತವಲ್ಲವಾದಕಾರಣ ಅದ್ವೈತಮತವು ಬೇರೆ ಬೌದ್ಧಮತವು ಬೇರೆ. ಯಜ್ಞಾದಿ ಕರ್ಮಗಳನ್ನು ಮಾಡಿ ಅಹಂಬ್ರಹ್ಮ ಅಹಂಬ್ರಹ್ಮ ಎಂದು ಉಪಾಸನೆಮಾಡಿ ಅಂತಃಕರಣವು ಶುದ್ಧಆದನಂತರ ವೇದಾಂತಶಾಸ್ತ್ರಗಳಿಂದ ಅಹಂಬ್ರಹ್ಮವೆಂದು ಅಪರೋಕ್ಷಜ್ಞಾನವನ್ನು ಸಂಪಾದನ ಮಾಡಿಕೊಂಡು ಆ ಜ್ಞಾನದಿಂದ ಅಜ್ಞಾನ ನಿವೃತ್ತಿಯನ್ನು ಹೊಂದಿ ನಿರ್ಗುಣ ಬ್ರಹ್ಮಭಾವರೂಪ ಮೋಕ್ಷವನ್ನು ಹೊಂದತಕ್ಕದ್ದು. (ನಾವು ನಿರ್ಗುಣಬ್ರಹ್ಮನು ಅಲ್ಲ ಎಂಬ ಭ್ರಮವನ್ನಾ ನಿವೃತ್ತಿಮಾಡಿಕೊಳ್ಳತಕ್ಕದ್ದು) ಇದೇ ಉತ್ತಮಫಲವು. ಎಂದು ಸಿದ್ಧಾಂತಲೇಶಸಂಗ್ರಹ ಮೊದಲಾದ ಅದ್ವೈತಿಗಳ ಗ್ರಂಥಗಳಲ್ಲಿ ಹೇಳ ಲ್ಪಟ್ಟದೆ. ಬ್ರಹ್ಮನು ಸರ್ವಜ್ಞತ್ವ, ಸ್ವತಂತ್ರತ್ವ, ಸರ್ವೇಶತ್ವ, ಸರ್ವೋತ್ತಮತ್ವ, ಸತ್ಯಸಂಕಲ್ಪತ್ವ, ಸತ್ಯಕಾಮತ್ವ; ಮೊದಲಾದ ಕಲ್ಯಾಣಗುಣಗಳಿಂದ ಪೂರ್ಣನು.

ಜಗತ್ತು ಸತ್ಯವು.

ಜೀವವು ಪರಮಾತ್ಮನ ದಸೆಯಿಂದಭಿನ್ನನು.

ಮೋಕ್ಷವು ಜೀವ ಪರಮಾತ್ಮರಗಳ ಭೇದಜ್ಞಾನದಿಂದ ಆಗುತ್ತದೆ.

ಮೋಕ್ಷದಲ್ಲಿಯೂ ಜೀವಪರಮಾತ್ಮರಗಳಿಗೆ ಭೇದವುಂಟು ಇವೇ ಮೊದ ಲಾದ ದ್ವೈತಿಗಳುಹೇಳುವ ಪ್ರಮೇಯಗಳು ವೇದ, ಸೂತ್ರ, ಗೀತಾ ಇವುಗಳಲ್ಲಿ ಹೇಳಲ್ಪಟ್ಟದಾಗ್ಯೂ ಆ ತತ್ವಗಳನ್ನು ಪ್ರತಿಪಾದನ ಮಾಡುವದರಲ್ಲಿ ವೇದಾದಿ ಗಳಿಗೆ ತಾತ್ಪರ್ಯ ವಿಲ್ಲವಾದ ಕಾರಣ ಆ ದ್ವೈತಮತವು ಆ ಪ್ರಕಾರ ಆಚರ ಣೆಯು, ಆಮೋಕ್ಷವು, ಮೊದಲನೇ ಮೆಟ್ಲು ಕನಿಷ್ಟವಾದದ್ದು (Lower stage

ನಮ್ಮ ಅದ್ವೈತಮತವು, ಅದ್ವೈತಮತದಪ್ರಕಾರ ಆಚರಣೆಯು, ಆಮೋ ಕ್ಷವು,ಮೇಲಿನಮೆಟ್ಲು ಉತ್ತಮವಾದದ್ದು (Higher stage) ಆದ್ದರಿಂದ ಉತ್ತಮ ಫಲವನ್ನು ಅಪೇಕ್ಷಿಸುವವರು ಅದ್ವೈತಮತದಪ್ರಕಾರ ಆಚರಣಮಾಡತಕ್ಕದ್ದು ಎಂಬು ಕೋರ್ಟಿನವರು ಆರ್ಡರಮಾಡಿ ದ್ವೈತಿಗಳ ದಾವೆಯನ್ನು ತೆಗೆದು ಹಾಕ ತಕ್ಕದ್ದು ಎಂತ ಪ್ರಾರ್ಥನೆ.

## ವಾದಿವಕೀಲರ ರೀ ಆರ್ಗ್ಯುಮೆಂಟ.

ಪ್ರತಿವಾದಿಯು "ಬ್ರಹ್ಮಸತ್ಯಂಜಗನ್ಮಿಥ್ಯಾ ಜೀವೋಬ್ರಹ್ಮೈವನಾಪರಃ" ಎಂದು ಬ್ರಹ್ಮನವಸೆಯಿಂದ ಭಿನ್ನವಾದ ಯಾವತ್ತಾಜಗತ್ತಾ ಶಶವಿಷಾಣದಂತೆ ಮರುವ.ರೀಚಿಕೆಯಂತೆ, ಗಂಧರ್ವನಗರದಂತೆ, ಸುಳ್ಳು (ಅಸತ್ಯ) ಎಂದು ಬೌದ್ಧರಂತೆ ಒಪಂಬಟ್ಟಮೇಲೆ ವೇದವೂ ಸುಳ್ಳು, ಅದಕ್ಕೆ ಪ್ರಾಮಾಣ್ಯವು ಸುಳ್ಳು, ಸ್ವರ್ಗಾದಿ ಪರಲೋಕಗಳು ಸುಳ್ಳು, ಅವಕ್ಕೆ ಸಾಧನಗಳು ಸುಳ್ಳು, ಎಂದು ಸಿದ್ಧಿಸುತ್ತದೆ. ಆದಕಾರಣ ಈ ವಿಷಯಗಳಲ್ಲಿ ಅದ್ವೈತಮತಕ್ಕೂ ಬೌದ್ಧಮತಕ್ಕೂ ಭೇದಬರುವದಿಲ್ಲ.

ಅದ್ವೈತಿಗಳಂತೆ ಪರಲೋಕ ಮುಂತಾದ ಜಗತ್ತು ವ್ಯಾವಹಾರಿಕ ಸತ್ಯವಾದದ್ದು ಎಂದು ಬೌದ್ಧರು ಒಪ್ಪುತ್ತಾರೆಂಬುವದು ಬೌದ್ಧರ ಗ್ರಂಥಗಳಿಂದಲೂ ಅದ್ವೈತರ ಗ್ರಂಥಗಳಿಂದಲೂ ಸಿದ್ಧವಾಗುತ್ತದೆ. ಆದುದರಿಂದ ಆ ವಿಷಯದಲ್ಲಿಯೂ ಎರಡೂ ಮತಗಳಿಗೆ ಭೇದವು ಬರುವದಿಲ್ಲ. ವೇದ ಮೊದಲಾದ ಜಗತ್ತಿಗೆ ವ್ಯಾವಹಾರಿಕ ಸತ್ಯತ್ವವನ್ನು ಪ್ರಮಾಣಗಳು ತಿಳಿಸುವದಿಲ್ಲಾ. ಪಾರಮಾರ್ಥಿಕ ಸತ್ಯತ್ವವನ್ನೇ ತಿಳಿಸುತ್ತವೆಂದು ಶಂಕರಭಾಷ್ಯ ಭಾಮತಿ ಗ್ರಂಥಗಳಿಂದ ತಿಳಿದು ಬರುತ್ತದೆ. ಆದಪ್ರಯುಕ್ತ ಪ್ರಮಾಣಗಳಿಂದ ಸಿದ್ಧವಾದ ವೇದ ಮೊದಲಾದ ಜಗತ್ತಿಗೆ ವ್ಯಾವಹಾರಿಕ ಸತ್ಯತ್ವವನ್ನು ಹೇಳುತ್ತೇವೆಂಬುವದು ಯುಕ್ತವಾಗುವದಿಲ್ಲ.

ವ್ಯಾವಹಾರಿಕ ಸತ್ಯವೆಂದರೆ ಅಸತ್ಯವೇ ಎಂದು ಅಪ್ಪಯದೀಕ್ಷಿತ ಮೊದಲಾದ ಅದ್ವೈತಿಗಳು ವಪ್ಪಿರೋಣದರಿಂದ ಜಗತ್ತು ಅಸತ್ಯವೆಂದರೆ ಹೇಗೆ ಪ್ರಮಾಣವಿರೋಧವು ಬರುತ್ತದೆಯೋ ಹಾಗೆಯೇ ಜಗತ್ತು ವ್ಯಾವಹಾರಿಕಸತ್ಯವೆಂದಾಗ್ಯೂ ಪ್ರಮಾಣ ವಿರೋಧವು ಬರುತ್ತದೆ.

ಶಂಕರಾಚಾರ್ಯರ ಗ್ರಂಥದಿಂದ ಮತ್ತು ಶಂಕರವಿಜಯ ಗ್ರಂಥಗಳಿಂದ "ಶಂಕರಾಚಾರ್ಯರು ಬೌದ್ಧಮತವನ್ನು ಖಂಡನಮಾಡಿಲ್ಲಾ, ಕುಮಾರಿಲಭಟ್ಟರೇ ಮಾಡಿದ್ದಾರೆಂದೂ" ಸಿದ್ಧಿಸುವದಾದ್ದರಿಂದ ಬೌದ್ಧಮತವನ್ನು ಶಂಕರಾಚಾರ್ಯರು ಖಂಡನ ಮಾಡಿದ್ದಾರಾದ ಕಾರಣ ಶಾಂಕರಾದ್ವೈತಮತವು ಬೌದ್ಧಮತವಲ್ಲಾ ಎಂದು ಹೇಳುವದು ಯುಕ್ತವಲ್ಲ. ಅದ್ವೈತಮತವು ಬೌದ್ಧಮತವೇ ಎಂದು ಸಾಕ್ಷಾತ್ ನಾರಾಯಣಾವತಾರವಾದ ವೇದವ್ಯಾಸದೇವರೇ ಹೇಳಿದ್ದಾರೆ. ಶಂಕರಾಚಾರ್ಯರಕಿಂತ ಪೂರ್ವದಲ್ಲಿಯೇ (ಅದ್ವೈತ

ಮತವು ಯಾವಕಾಲಕ್ಕೆ ಪ್ರಚಾರಕ್ಕೆ ಬಂತೋ ಆ ಕಾಲದಲ್ಲಿಯೇ ಅದ್ವೈತ ಮತವು ಬೌದ್ಧಮತವೆಂದು ಅಗಿನಕಾಲದ ವಿದ್ವಾಂಸರು ಹೇಳಿದ್ದಾರೆಂಬು ಗೌಡಪಾದಾಚಾರ್ಯರು ಶಂಕರಾಚಾರ್ಯರು ಮುಂತಾದ ಅದ್ವೈತಿಗಳ ಗ್ರಂಥಗಳಿಂದೇ ತಿಳಿದು ಬರುತ್ತದೆ. ಶಂಕರಾಚಾರ್ಯ ಮೊದಲಾದ ಅದ್ವೈತಿಗಳು ಬೌದ್ಧಮತಕ್ಕೂ ತಮ್ಮ ಮತಕ್ಕೂ ಸಾಮ್ಯವನ್ನು ಒಪ್ಪಿ ತಮ್ಮಮತದ ಆಗ್ರಹದಿಂದ ಏನೋ ಭೇದವನ್ನು ತೋರಿಸಿದ್ದಾರೆ ಹೊರತು ವಸ್ತುತಃಭೇದವು ಇಲ್ಲ.

ಶಂಕರಾಚಾರ್ಯರ ಸಮಕಾಲೀನರಾದ ಭಾಸ್ಕರಾಚಾರ್ಯರು ವಿಜ್ಞಾನ ಭಿಕ್ಷುಗಳು ಮೊದಲಾದ ಪಂಡಿತರುಗಳು ಅದ್ವೈತಮತವು ಬೌದ್ಧಮತವೆಂದು ಹೇಳಿರುತ್ತಾರಾದಕಾರಣ ದ್ವೈತಿಗಳು ಈಗ್ಯೆ ದ್ವೇಷಮೂಲಕವಾಗಿ ಹೇಳುತ್ತಾ ರೆಂದು ಹೇಳುವದು ಸರಿಯಲ್ಲ. ಅದ್ವೈತಮತ ತತ್ವಗಳಿಗೂಬೌದ್ಧಮತ ತತ್ವಗ ಳಿಗೂ ಭೇದವಿಲ್ಲದೆ ಇದ್ದಪ್ರಯುಕ್ತ ಆ ಎರಡೂ ಮತಗಳು ಒಂದೇ ಎಂಬುವದು (ಯಾವದು ಹ್ಯಾಗೆ ಅದೆಯೋ ಅದನ್ನು ಹಾಗೆಯೆಂದು ಹೇಳುವದು) ದ್ವೇಷ ಮೂಲಕವೆಂಬ ಕಲ್ಪನಾಮಾಡಲಿಕ್ಕೆ ಕಾರಣವಾಗುವದಿಲ್ಲ. ಕೋರ್ಟಿನಲ್ಲಿ ಒಬ್ಬನು ಒಂದು ವಿಷಯದಲ್ಲಿ ಸಾಕ್ಷಿಯನ್ನು ಹೇಳಿದರೆ ಅದಕ್ಕೆ ಬಾಧಕವು ಬರದೆ ಹೋದರೆ ಸಾಕ್ಷಿದಾರನು ಹೇಳಿದ್ದೇ ನಿಜವೆಂದು ಹೇಗೆ ಒಪ್ಪುತ್ತಾರೆಯೋ ಹಾಗೆ ಯೇ ಶಂಕರಾಚಾರ್ಯರ ಪೂರ್ವಕಾಲೀನರು ಶಂಕರಾಚಾರ್ಯರ ಸಮಕಾಲೀ ನರು ಶಂಕರಾಚಾರ್ಯರ ಅನಂತರ ಬಂದವರುಕೂಡಾ ಅದ್ವೈತಮತವು ಬೌದ್ಧ ಮತವೇ ಎಂದು ಹೇಳುತ್ತಾರೆ. ತತ್ವಗಳ ತುಲನಾಮಾಡಿದರೂ ಹಾಗೆಯೇ ಸಿದ್ಧಿ ಸುತ್ತದೆ. ಒಂದೆ ಎಂಬುವದಕ್ಕೆ ಯಾವಬಾಧಕವೂ ಇಲ್ಲವಾದ ಪ್ರಯುಕ್ತ ಒಪ್ಪ ತಕ್ಕದ್ದಾಗಿದೆ. ಶಂಕರಾಚಾರ್ಯರು ಮೊದಲಾದ ಅದ್ವೈತಿಗಳು ಬೌದ್ಧಮತಕ್ಕೂ ಅದ್ವೈತಮತಕ್ಕೂ ಬಹಳ ಅಂಶಗಳಲ್ಲಿ ಸಾಮ್ಯವನ್ನು ಒಪ್ಪುತ್ತಾ, ಏನೋ ಕೆಲ ವಂಶಗಳಲ್ಲಿ ಬೇದ ಇದ್ದಂತೆ ತೋರಿಸುತ್ತಾರೆ. ವಸ್ತುತಃ ಭೇದವು ಇಲ್ಲವೆಂಬುವ ದನ್ನೇಪೂರ್ವದಲ್ಲಿ ವಿಜ್ಞಾಪನ ಮಾಡಿಕೊಂಡಿದ್ದೇನಾದಕಾರಣ ಅದ್ವೈತಮತವು ಬೌದ್ಧಮತವೇ.

ಅದ್ವೈತಿಗಳು ಬ್ರಹ್ಮವು ಜ್ಞಾನರೂಪವು, ಆನಂದರೂಪವು ಸತ್ಯ ಎಂದು ಹೇಳುತ್ತಾರೆ, ಬೌದ್ಧರು ಶೂನ್ಯವು ಅಸತ್ಯವೆಂದು ಜ್ಞಾನರೂಪವಲ್ಲಾ ಆನಂದ ರೂಪವಲ್ಲಾ ಎಂದು ಹೇಳುತ್ತಾರೆ. ಆದುದರಿಂದ ಬೌದ್ಧಮತಕ್ಕೂ ಅದ್ವೈತಮತ ಕ್ಕೂ ಈ ಅಂಶದಲ್ಲಿ ಭೇದ ಉಂಟು ಎಂದು ಹೇಳುವದು ಯುಕ್ತವಲ್ಲ. ಬ್ರಹ್ಮವು

ಸತ್ಯವು ಜ್ಞಾನಸ್ವರೂಪವು, ಆನಂದ ಸ್ವರೂಪವು, ಅಜ್ಞೇಯವೂ, ಅವಾಚ್ಯವೂ ಸಕಲ ಧರ್ಮರಹಿತವೂ ಎಂದು ಅದ್ವೈತಿಗಳು ಹೇಳುವಂತೆ, ಶೂನ್ಯವು ಸತ್ಯವು ಜ್ಞಾನರೂಪವು, ಆನಂದರೂಪವು, ಅಜ್ಞೇಯವೂ, ಅವಾಚ್ಯವೂ ಸಕಲ ಧರ್ಮ ರಹಿತವೂ ಎಂದು ಹೇಳುತ್ತಾರೆಂಬುವದು ಬೌದ್ಧರಗ್ರಂಥಗಳಿಂದಲೂ ಅದ್ವೈತಿ ಗಳಗ್ರಂಥದಿಂದಲೂ ಸಿದ್ಧಿಸುತ್ತದಾದ್ದರಿಂದ ಕೇವಲ ಶೂನ್ಯವು, ಬ್ರಹ್ಮನುಎಂದು ನಾಮಭೇದವೇ ಹೊರತು ವಸ್ತುಗಳಿಗೆ ಭೇದವಿಲ್ಲ. ಅದ್ವೈತಿಗಳು ಬ್ರಹ್ಮನಲ್ಲಿ ಯಾವಭೇದವನ್ನೂ ಒಪ್ಪುವದಿಲ್ಲದ ಪ್ರಯುಕ್ತ ಶೂನ್ಯಭೇದವು ಬ್ರಹ್ಮನಲ್ಲಿ ಒಪ್ಪುವದಕ್ಕೆ ಬರುವದಿಲ್ಲ, ಭೇಧಕ ಧರ್ಮವಿರದ ಇರೋಣದರಿಂದ ಭೇಧವು ಸಿದ್ಧಿಸುವದಿಲ್ಲ. "ಬೌದ್ಧರ ಶೂನ್ಯವು ಭಾವರೂಪವಾದರೆ ಶೂನ್ಯವಾದವು ಬ್ರಹ್ಮವಾದವೇ ಎಂದು" ಹೇಳುವ ಅದ್ವೈತಿಗಳಾದ ಬ್ರಹ್ಮವಿದ್ಯಾಭರಣಕಾರರು ಶೂನ್ಯವು ಭಾವರೂಪವಾದರೆ ಶೂನ್ಯವು ಬ್ರಹ್ಮರೂಪವೇ ಎಂದು ಒಪ್ಪಿದಂತೆ ಆಗುತ್ತದೆ. ಶೂನ್ಯವು ಪ್ರಪಂಚಾಭಾವರೂಪವಾದಾಗ್ಯೂ ಅದ್ವೈತ ಸಿದ್ಧ್ಯಾದಿ ಗ್ರಂಥಗಳಲ್ಲಿ ಬ್ರಹ್ಮನು ಪ್ರಪಂಚಾಭಾವರೂಪನೆಂದು ಒಪ್ಪಿರುತ್ತಾರಾದಕಾರಣ ಅದ್ವೈತಿಗಳ ಪ್ರಪಂಚಾಭಾವರೂಪವಾದ ಬ್ರಹ್ಮವು ಪ್ರಪಂಚಾಭಾವರೂಪ ವಾದ ಬೌದ್ಧರ ಶೂನ್ಯವು ಒಂದೇ ಆಗುವದು.

ಅದ್ವೈತರಬ್ರಹ್ಮವು ವೇದಾದಿ ಪ್ರಮಾಣಗಳಿಂದ ಸಿದ್ಧಿಸುವದಿಲ್ಲವೆಂದು ಅದ್ವೈತಿಗಳೇ ಒಪ್ಪಿಕೊಂಡಿರೋಣದರಿಂದ ಬೌದ್ಧರ ಶೂನ್ಯದಂತೆ ಅಪ್ರಾಮಾ ಣಿಕವೇ ಆದ್ದರಿಂದ, ಅದ್ವೈತಿಗಳ ಬ್ರಹ್ಮವು ಅಂಗೀಕಾರಾರ್ಹವಲ್ಲ,

"ಬ್ರಹ್ಮನು ಸ್ವಪ್ರಕಾಶನಾದ್ದರಿಂದ ಸಿದ್ಧಿಸುತ್ತಾನೆಂಬುವದು" ಯುಕ್ತವಲ್ಲ. ಯಾಕಂದರೆಬ್ರಹ್ಮನು ಪ್ರಮಾಣಗಳಿಂದತಿಳಿಯುಲಿಕ್ಕೆ ಯೋಗ್ಯನಲ್ಲವಾದಕಾರಣ ಸ್ವಪ್ರಕಾಶವೆಂಬ ವಿಷಯದಲ್ಲಿಯೂ ಪ್ರಮಾಣಗಳು ಇಲ್ಲಾ. ಪ್ರಮಾಣಗಳು ಇಲ್ಲದೇನೆ ಬ್ರಹ್ಮನು ಸ್ವಪ್ರಕಾಶನು ಎಂದು ಒಪ್ಪುವದಾದರೆ ಶಶವಿಷಾಣವೂ ಕೂಡ ಸ್ವಪ್ರಕಾಶವೆಂದು ಒಪ್ಪಬೇಕಾಗುವದು. ಬ್ರಹ್ಮ ಸ್ವಪ್ರಕಾಶನು ಎಂದು ಒಪ್ಪಿದರೂ ಸ್ವಪ್ರಕಾಶವೆಂದರೆ ಇತರ ಪ್ರಮಾಣಗಳಿಂದ ಅವೇದ್ಯವು. (ಇತರಾ ವೇದ್ಯವು) ಎಂದು ಅದ್ವೈತಿಗಳು ಹೇಳುವದರಿಂದ ಅವೇದ್ಯವಾದ ವಸ್ತು ಸಿದ್ಧಿ ಸಿತು=ವೇದ್ಯವಾಯಿತು ಎಂಬುವದು ಹೇಗೆ ಕೂಡುತ್ತದೆ. ಹಾಗೆ ಒಪ್ಪಿದರೆ ಬ್ರಹ್ಮನಂತೆ ಪ್ರಮಾಣಗಳಿಂದಾ ಅವೇದ್ಯವಾದ ಶಶವಿಷಾಣವು ವೇದ್ಯವಾಗ ಬೇಕಾಗುವದು ಕಾರಣ ಅದ್ವೈತಬ್ರಹ್ಮನು ಶಶವಿಷಾಣದಂತೆ ಅಪ್ರಾಮಾಣಿಕನು.

ವೇದವು ಅದ್ವೈತಬ್ರಹ್ಮನನ್ನು ಪ್ರತಿಪಾದನ ಮಾಡುವದಿಲ್ಲ. ವೇದ

ದಿಂದ ಪ್ರತಿಪಾದ್ಯವಾದ ಜಗತ್ತು ಸುಳ್ಳು ಆದಮೇಲೆ ವೇದವು ಪ್ರಮಾಣವು (ಸತ್ಯವಾದ ಪದಾರ್ಥವನ್ನು ಬೋಧಿಸುವದು ಎಂಬುವನು ಕೂಡುವದಿಲ್ಲಾದ್ದು ರಿಂದ ವೇದವು ಅದ್ವೈತಮತದರೀತ್ಯಾ ಅಪ್ರಮಾಣವೇ.

ಬೌದ್ಧರೂ ಸಹ "ಸ್ವರ್ಗಕಾಮಶ್ಚೈತ್ಯಂ ವಂದೇತ" ಎಂಬ ಶಾಸ್ತ್ರಾಧಾರ ವನ್ನು ಇಟ್ಟುಕೊಂಡು ಸ್ವರ್ಗಾರ್ಥವಾಗಿ ಪುಣ್ಯಕೆಲಸವನ್ನು ಮಾಡುತ್ತಾರೆ. ಮತ್ತು ಅಹಂಶೂನ್ಯಂ ಅಹಂಶೂನ್ಯಂ ಎಂದು ಉಪಾಸನಾಮಾಡಿ ಶೂನ್ಯಾಪರೋಕ್ಷವನ್ನು ಹೊಂದಿ ನಿರ್ಗುಣಶೂನ್ಯಭಾವರೂಪ ಮೋಕ್ಷವನ್ನು (ಅದ್ವೈತಿಗಳ ನಿರ್ಗುಣ ಬ್ರಹ್ಮ ಭಾವರೂಪ ಮೋಕ್ಷದಂತೆ) ಹೊಂದುತ್ತೇವೆಂದು ಹೇಳುತ್ತಾರೆಂದು ಅದ್ವೈತಿಗಳೇ ಹೇಳಿರೋಣದರಿಂದ "ಅದ್ವೈತಿಗಳು ವೇದೋಕ್ತಕರ್ಮಗಳನ್ನು ಮಾಡಿಕೊಂಡು, ಸ್ವರ್ಗಾದಿ ಲೋಕಗಳನ್ನು ಹೊಂದುತ್ತಾರೆ ಮತ್ತು ಶುದ್ಧಾಂತಃಕರಣರಾಗಿ ಶ್ರವಣಾದಿಗಳನ್ನಾ ಮಾಡಿ ಬ್ರಹ್ಮಾಪರೋಕ್ಷವನ್ನು ಸಂಪಾದಿವಿಕೊಂಡು ನಿರ್ಗುಣಬ್ರಹ್ಮಭಾವರೂಪ ಮೋಕ್ಷವನ್ನು ಹೊಂದುತ್ತಾರೆ. ಬೌದ್ಧರು ಪುಣ್ಯಕರ್ಮವನ್ನು ಮಾಡಿಕೊಂಡು ಸ್ವರ್ಗಾದಿ ಲೋಕಗಳನ್ನು ಹೊಂದುವದಿಲ್ಲ, ಮೋಕ್ಷವನ್ನು ಹೊಂದುವದೂ ಇಲ್ಲ" ಎಂದು ಭೇದವನ್ನು ಹೇಳುವದು ಯುಕ್ತವಲ್ಲ.

ಯಜ್ಞಸುಳ್ಳು, ಉಪಾಸನಾಸುಳ್ಳು, ಮಾಡುವದು ಸುಳ್ಳು, ಮಾಡುವವನು ಸುಳ್ಳು, ಅಂತಃಕರಣವೂಸುಳ್ಳು, ಶುದ್ಧಿಯೂಸುಳ್ಳು, ಶಾಸ್ತ್ರವು ಸುಳ್ಳು, ಶಾಸ್ತಾ (ಶಾಸನಮಾಡುವವನು) ಸುಳ್ಳು, ವೇದವುಸುಳ್ಳು, ಅದ್ವೈತರ ನಿರ್ಗುಣಬ್ರಹ್ಮವೂ ಸುಳ್ಳು, ಬಂಧವೂಸುಳ್ಳು, ಮೋಕ್ಷವೂ ಸುಳ್ಳು, ಮೋಕ್ಷದ ಇಚ್ಛಾಮಾಡುವವನು ಸುಳ್ಳು ಬ್ರಾಹ್ಮಣಾದಿ ವರ್ಣಗಳೂಸುಳ್ಳು, ಬ್ರಹ್ಮಚರ್ಯಾದ್ಯಾಶ್ರಮಗಳುಸುಳ್ಳು, ಎಂತ ಹೇಳುತ್ತಾ ನಾವೂ ಸುಳ್ಳು, ಬ್ರಾಹ್ಮಣರಗಳೂ ಸುಳ್ಳು, ಬ್ರಹ್ಮಚರ್ಯಾದ್ಯಾಶ್ರಮಗಳೂ ಸುಳ್ಳು, ಸುಳ್ಳಾದ ಬ್ರಹ್ಮಚರ್ಯಾದ್ಯಾಶ್ರಮಗಳಿಗೆ ಸುಳ್ಳಾದ ವೇದದಿಂದ ಸುಳ್ಳಾಗಿ ಹೇಳಲ್ಪಟ್ಟ ಸುಳ್ಳಾದ ಯಜ್ಞಾದಿಗಳನ್ನು ಸುಳ್ಳಾಗಿಮಾಡಿ ಸುಳ್ಳಾದ ಅಂತಃಕರಣದ ಸುಳ್ಳಾದ ಶುದ್ಧಿಯನ್ನು ಸುಳ್ಳಾಗಿ ಸಂಪಾದಿಸಿಕೊಂಡು ಸುಳ್ಳಾದ ಶ್ರವಣಾದಿಗಳನ್ನುಮಾಡಿ ಸುಳ್ಳಾದ ವೇದಾಂತ ಶಾಸ್ತ್ರಗಳಿಂದಾ ಸುಳ್ಳಾದ ನಿರ್ಗುಣ ಬ್ರಹ್ಮಜ್ಞಾನವನ್ನು ಸಂಪಾದನಮಾಡಿ ಸುಳ್ಳಾದ ಮೋಕ್ಷವನ್ನು ಹೊಂದುತ್ತೇನೆ ಎಂಬುವದು ಬಂಜೆಯಮಗನು ಮರುಮರೀಚಿಕೆಯಲ್ಲಿ (ಬಿಸಲು ಕುದುರೆಯಲ್ಲಿ) ಸ್ನಾನಮಾಡಿ ಗಗನ ಕುಸುಮದಿಂದ ಅಲಂಕೃತನಾಗಿ ಶಶಶೃಂಗಧನುಸ್ಸನ್ನು ಹಿಡಿದುಕೊಂಡು ಯುದ್ಧವನ್ನು ಮಾಡುತ್ತಾನೆ ಎಂಬಂತೆ ಅಯುಕ್ತವಾಗುತ್ತದೆ ಎಂಬುವದು ಸಣ್ಣಬಾಲಕರಿಗೂ ಕೂಡ ತಿಳಿಯುತ್ತದೆ.

"ಜ್ಯೋತಿಷ್ಟೋಮಾದಿ ಶ್ರುತಿಬೋಧಿತಾನುಷ್ಠಾನಾತ್ ಫಲಸಿದ್ಧಿಃ ಸ್ವಾಪ್ನ ಶ್ರುತಿಬೋಧಿತಾನುಷ್ಠಾನಪ್ರಯುಕ್ತಫಲಸಂಪಾದತುಲ್ಯಾ" ಎಂದು ಸಿದ್ಧಾಂತ ಲೇಶ ಸಂಗ್ರಹ ಮುಂತಾದ ಗ್ರಂಥಗಳಿಂದ, ಸ್ವಪ್ನಪದಾರ್ಥಗಳಂತೆ ಯಾಗವೂ ಸ್ವರ್ಗವೂ ಎಲ್ಲಾ ಸುಳ್ಳು. "ನಹಿಸ್ವಪ್ನ ಸಂಖಾದ್ಯರ್ಥಂ ಧರ್ಮೇಕಶ್ಚಿತ್ ಪ್ರವರ್ತತೆ" ಎಂದು ಕುಮಾರಿಲಭಟ್ಟರು ಹೇಳಿದಂತೆ ಸ್ವರ್ಗಾರ್ಥವಾಗಿ ಯಾಗಾ ದಿಗಳಲ್ಲಿ ಪ್ರವರ್ತರಾಗುವದು ಅಯುಕ್ತವು ಎಂದು ಅದ್ವೈತಿಗಳು ತಿಳಿದು ಕೊಂಡಾಗ್ಯೂ "ವಂಚನಾರ್ಥ ಮುಪನ್ಯಾಸಃ" ಎಂದು ಹೇಳಿದಪ್ರಕಾರ ಆಸ್ತಿಕ ವಂಚನಾರ್ಥವಾಗಿಯೇ ಕರ್ಮಾದಿಗಳನ್ನು ಮಾಡುವವರಂತೆ ತೋರಿಸುತ್ತಾರೆ. ವಸ್ತುತಃ ಅವರ ಮತಪ್ರಕಾರ ಕರ್ಮಮಾಡತಕ್ಕದ್ದು ಇಲ್ಲಾ. ಅದಕ್ಕೆ ಫಲವೂ ಇಲ್ಲವಾದ್ದರಿಂದ ಅದ್ವೈತಮತವೂ ಅವೈದಿಕವಾದ ಶೂನ್ಯವಾದಿಗಳಾದ ಬೌದ್ಧರ ಮತವೂ ಒಂದೇ ಆದದ್ದು ಎಂದು ಆರ್ಡರಮಾಡಬೇಕು ಮತ್ತು ಕೋರ್ಟಿನ ವರೇ ಯಾವದು ಉಚಿತವಾದದ್ದು ಎಂದು ತೋರುತ್ತದೆಯೋ ಆ ಆರ್ಡರನ್ನಾ ಮಾಡತಕ್ಕದ್ದು ಎಂದು ಪ್ರಾರ್ಥನೆ.

---

## ವಿಜ್ಞಾನವಾದಿ ವಿಷಯದಲ್ಲಿ ವಾದಿ ವಕೀಲರ ಆರ್ಗ್ಯುಮೆಂಟು.

---

ವಾ. ವ. (ಕೋರ್ಟಿಗೆ) ಮಹಾಪ್ರಭುಗಳೇ!

† "ಆರೋಪದೃಷ್ಟಿ" ಎಂಬ ಮೊದಲಾದ ಶ್ಲೋಕಗಳಿಂದ ಅಧಮಾಧಿ ಕಾರಿಗಳಗೋಸ್ಕರ ಪರಿಣಾಮದೃಷ್ಟಿಯೂ (ಪರಿಣಾಮವಾದವು) ಮಧ್ಯಮಾಧಿ ಕಾರಿಗಳನ್ನು ಕುರಿತು ವ್ಯಾಮಿಶ್ರ ದೃಷ್ಟಿಯು (ವಿವರ್ತವಾದವು) ಉತ್ತಮಾಧಿ ಕಾರಿಗಳನ್ನು ಕುರಿತು ದ್ವೈತೋಪಶಮದೃಷ್ಟಿಯು (ಪ್ರಪಂಚರಹಿತವಾದ ಜೀವ ಬ್ರಹ್ಮೈಕ್ಯದೃಷ್ಟಿಯು) ಈ ಪ್ರಕಾರ ಅದ್ವೈತಿಗಳು ಮೂರುದೃಷ್ಟಿಯನ್ನು ಹೇಳು

---

† ಆರೋಪದೃಷ್ಟಿರುದಿತಾ ಪರಿಣಾಮ ದೃಷ್ಟಿರ್ದ್ವೈತೋಪಶಾಂತಿರಪ ವಾದಕ ದೃಷ್ಟಿರಂತ್ಯಾ॥ ಮಧ್ಯೇವಿವರ್ತ ವಿಷಯಾದ್ವಯಮಿಶ್ರದೃಷ್ಟಿಃ ವ್ಯಾಮಿ ಶ್ರದೃಷ್ಟಿ ರಧರೋತ್ತರ ಭೂಮಿ ಭಾವಾತ್ (೨।೮೨).

ಕೃಪಣಧೀಃ ಪರಿಣಾಮಮುದೀಕ್ಷತೆ ಕ್ಷಪಿತ ಕಲ್ಮಷಧೀಸ್ತು ವಿವರ್ತತಾಂ॥ ಸ್ಥಿರಮತಿಃ ಪುರುಷಃ ಪುನರೀಕ್ಷತೆ ವ್ಯಪಗತ ದ್ವಿತಿಯಂ ಪರಮಂಪದಂ (೨।೮೫) ಸಂಕ್ಷೇಪ ಶಾರೀರಕ

ನಂತೆ ಬೌದ್ಧರೂ ಸಹ (೧) ಅಧಮ ಶಿಷ್ಯರು (ಮೂಢಶಿಷ್ಯರು) ಆರಂಭಕ್ಕೆ ಸರ್ವವೂ ಶೂನ್ಯವೇ ತತ್ವವೆಂದು ಹೇಳಿದರೆ ಒಪ್ಪಲಾರರು ಎಂಬ ಅಭಿಪ್ರಾಯ ದಿಂದ ಆ ಮೂಢರಾದ ಶಿಷ್ಯರಗೋಸ್ಕರ ತೋರುವ ಬಾಹ್ಯಪದಾರ್ಥಗಳು ಸತ್ಯ ವಾದವುಗಳು, ಕ್ಷಣಿಕವಾದವುಗಳು ಎಂದು ಹೇಳುವ ಸೌತ್ರಾಂತಿಕ, ವೈಭಾಷಿಕ ಮತಗಳನ್ನು ಹೇಳಿ ಕ್ರಮಕ್ರಮವಾಗಿ ಸರ್ವವೂ ಶೂನ್ಯವೇ ಎಂದು ಕೊನೆಗೆ ಪರ್ಯವಸಾನ ಮಾಡಿದ್ದಾರೆ. (೨) ಮಧ್ಯಮರಾದ ಶಿಷ್ಯರಿಗೋಸ್ಕರ ಬಾಹ್ಯ ಜಗತ್ತು ಯಾವತ್ತೂ ಕಲ್ಪಿತವಾದದ್ದು, ವಿಜ್ಞಾನವಂದೇ ತತ್ವವು, ಎಂದು ಹೇಳುತ್ತಾ ಕೊನೆಗೆ ಸರ್ವವೂ ಶೂನ್ಯವೇ ಎಂದು ಪರ್ಯವಸಾನಮಾಡುತ್ತಾರೆ. (೩) ಉತ್ತಮರಾದ ಶಿಷ್ಯರಿಗೋಸ್ಕರ ಪ್ರಥಮದಲ್ಲಿಯೇ ಶೂನ್ಯವೇ ತತ್ವವು ಆಶೂನ್ಯದಲ್ಲಿ ಜಗತ್ತು ಯಾವತ್ತೂ ಕಲ್ಪಿತವು, ಸ್ವಪ್ನದಂತೆ ಸುಳ್ಳಾದದ್ದು ಎಂದು ಹೇಳುತ್ತಾರಾದಕಾರಣ, ವಿಜ್ಞಾನವಾದಿಮತವೂ, ಶೂನ್ಯವಾದಿಮತವೂ ಒಂದೇ, ಆ ಶೂನ್ಯವಾದಿ ಮತವು ಅದ್ವೈತಮತವು ಒಂದಾದಮೇಲೆ, ವಿಜ್ಞಾನವಾದಿ ಮತವೂ, ಅದ್ವೈತಮತವೂ ಸಹ ಒಂದೇ ಆಗುತ್ತದೆ.

ಇಷ್ಟೇ ಅಲ್ಲದೆ ವಿಜ್ಞಾನವು ಒಂದು ಸತ್ಯವಾದದ್ದು (ತತ್ವವು) ಆ ವಿಜ್ಞಾನ ದಲ್ಲಿ ಬಾಹ್ಯವಾದ ಸಮಸ್ತ ಜಗತ್ತು ಕಲ್ಪಿತವಾದದ್ದು ಎಂಬ ವಿಜ್ಞಾನವಾದಿ ಗಳಾದ ಬೌದ್ಧರ ತತ್ವಗಳನ್ನೇ ಅದ್ವೈತಶಾಸ್ತ್ರಕ್ಕೆ ಪ್ರಥಮ ಪ್ರವರ್ತಕರಾದ ಗೌಡಪಾದಾಚಾರ್ಯರು ಶಂಕರಾಚಾರ್ಯರು, ಪಂಚಪಾದಿಕಾಕಾರರು ವಿವರಣ ಕಾರರು. ತತ್ವದೀಪನಕಾರರು, ಮೊದಲಾದ ಎಲ್ಲಾ ಅದ್ವೈತಿಗಳು ಒಪ್ಪಿರೋ ದರಿಂದ ಈ ಅದ್ವೈತಮತವು ವಿಜ್ಞಾನವಾದಿಗಳಾದ ಬೌದ್ಧರ ಮತವೇ ಅದರಂತೆ ಅವೈದಿಕವಾದದ್ದು, ವೈದಿಕರಾದ ಆಸ್ತಿಕಜನರು ಇಂಥ ಅವೈದಿಕವಾದ ಅದ್ವೈತ ಮತವನ್ನು ವೈದಿಕಮತವೆಂದು ಭ್ರಮದಿಂದ ಆಶ್ರಯಿಸಿ "ಮಾಮಪ್ರಾಪ್ಯೈವ ಕೌಂತೇಯ ತತೋಯಾಂತ್ಯಧಮಾಂಗತಿಂ ॥ (ಗೀ. ೧೬।೨೦) ಎಂದು ಗೀತೆಯಲ್ಲಿ ಹೇಳಿದಪ್ರಕಾರ ಪರಮಾತ್ಮನನ್ನು ಹೊಂದದಲೇ ಅಧೋಗತಿಯನ್ನು ಹೊಂದು ವರು. ಆದಕಾರಣ ಅವರ ಕ್ಷೇಮಾರ್ಥವಾಗಿ, (೧) ಈ ಅದ್ವೈತಮತವು ಅವೈದಿಕವಾದ ಬೌದ್ಧಮತವಾದದ್ದು. (೨) ಈ ಅದ್ವೈತಮತವನ್ನು ವೈದಿಕ ಮತವೆಂದು ಉಪದೇಶಮಾಡಬಾರದು, ಎಂದು ಕೋರ್ಟಿನವರು ನಿರ್ಣಯ ಮಾಡಿ ತಾಕೀದ ಕೊಡಬೇಕು ಎಂದು ಪ್ರಾರ್ಥನಾ ಮಾಡಿಕೊಳ್ಳುತ್ತೇನೆ.

## ಪ್ರತಿವಾದಿ ವಕೀಲರ ಆರ್ಗ್ಯುಮೆಂಟ.

ಯದ್ಯಪಿ ಬೌದ್ಧರು, ಉತ್ತಮ ಮಧ್ಯಮಾಧಮ ಶಿಷ್ಯರನ್ನು ಕುರಿತು ಬೇರೆಬೇರೆ ತತ್ವಗಳನ್ನು ಉಪದೇಶಮಾಡಿದಂತೆ ತೋರಿಸಿದಾಗ್ಯೂ ಆ ಎರಡೂ ಮತಗಳಿಗೂ ಹೇಗೆ ಸರ್ವಶೂನ್ಯತಾದಲ್ಲಿಯೇ ಪರ್ಯವಸಾನವೋ ಹಾಗೆಯೇ ಅದ್ವೈತಿಗಳು ಉತ್ತಮ ಮಧ್ಯಮ ಅಧಮ ಶಿಷ್ಯರನ್ನು ಕುರಿತು ಅವರವರ ಬುದ್ಧ್ಯನುಸಾರವಾಗಿ ಪರಿಣಾಮದೃಷ್ಟಿ, ವಿವರ್ತದೃಷ್ಟಿ, ದ್ವೈತೋಪಶಮ ದೃಷ್ಟಿ ಇವುಗಳನ್ನು ಉಪದೇಶಮಾಡಿದಾಗ್ಯೂ ಆ ಎರಡು ದೃಷ್ಟಿಗಳೂ ದ್ವೈತೋಪಶಮ ದೃಷ್ಟಿಯಲ್ಲಿಯೇ ಪರ್ಯವಸಿತವಾದಾಗ್ಯೂ ವಿಜ್ಞಾನವಾದಿಗಳ ತ್ರಿ ಜ್ಞಾನವಂದೇ ತತ್ವವು. ಆ ಜ್ಞಾನದಲ್ಲಿ ಸಮಸ್ತ ಜಗತ್ತು ಕಲ್ಪಿತವಾದದ್ದು ಸ್ವಪ್ನದಂತೆ ಸುಳ್ಳಾದದ್ದು ಎಂದು ಒಪ್ಪಿಕೊಂಡಿದ್ದಾಗ್ಯೂ ಇತರ ಅನೇಕವಿಷಯಗಳಲ್ಲಿ ಅದ್ವೈತಮತಕ್ಕೆ ಬೌದ್ಧಮತದಿಂದಾ ಭೇದವಿರೋಣದರಿಂದ ಅದ್ವೈತಮತವೂ ಬೌದ್ಧಮತವೂ ಒಂದೇ ಆಗುವದಿಲ್ಲ. ಅದ್ವೈತಮತಕ್ಕೆ ಬೌದ್ಧಮತದಿಂದ ಕೆಲವು ವಿಷಯಗಳಲ್ಲಿ ಸಾಮ್ಯ ಇದ್ದಮಾತ್ರಕ್ಕೆ ಅದ್ವೈತಮತವು ಬೌದ್ಧಮತವಾದರೆ ಒಂದೊಂದು ಮತಗಳಿಗೆ ಇನ್ನೊಂದು ಮತದಿಂದ ಕೆಲವು ವಿಷಯದಲ್ಲಿ ಸಾಮ್ಯವು ಇದ್ದೇ ಇರುತ್ತದೆ. ಆದುದರಿಂದ ಎಲ್ಲಮತಗಳು ಎಲ್ಲಮತಗಳಿಂದ ಒಂದೇ ಆಗಬೇಕಾಗುವದು. ಕಾರಣ ಅದ್ವೈತಮತಕ್ಕೆ ಕೆಲವು ಅಂಶದಲ್ಲಿ ಬೌದ್ಧಮತದಿಂದ ಸಾಮ್ಯ ಇದ್ದಮಾತ್ರದಿಂದ ಆ ಎರಡೂ ಮತಗಳು ಒಂದು ಆಗುವದಿಲ್ಲ.

(೧) ಬೌದ್ಧರ ವಿಜ್ಞಾನವು ಕ್ಷಣಿಕವಾದದ್ದು (ಕ್ಷಣಿಕತ್ವವುಳ್ಳದ್ದು) ಮತ್ತು ಅನೇಕವಾದದ್ದು (ಅನೇಕತ್ವವುಳ್ಳದ್ದು) ವೇದಾಂತಗಳಿಂದ ತಿಳಿಯಲಿಕ್ಕೆ ಯೋಗ್ಯವಾದದ್ದಲ್ಲ. ಅದ್ವೈತಿಗಳ ವಿಜ್ಞಾನವು (ಬ್ರಹ್ಮವು) ನಿತ್ಯವಾದದ್ದು (ನಿತ್ಯತ್ವವುಳ್ಳದ್ದು,) ಒಂದಾದದ್ದು (ಏಕತ್ವ ವುಳ್ಳದ್ದು) ವೇದಾಂತಗಳಿಂದಲೇ ತಿಳಿಯಲಿಕ್ಕೆ ಯೋಗ್ಯವಾದದ್ದು. ಬೌದ್ಧರು ಸ್ವರ್ಗಾದಿಗಳನ್ನು ಒಪ್ಪುವದಿಲ್ಲ, ಪುಣ್ಯಪಾಪಗಳನ್ನೂ ಒಪ್ಪುವದಿಲ್ಲ. ನಾವು (ಅದ್ವೈತಿಗಳು) ಸ್ವರ್ಗಾದಿಗಳನ್ನು ಒಪ್ಪುತ್ತೇವೆ, ಪುಣ್ಯ ಪಾಪಗಳನ್ನು ಒಪ್ಪುತ್ತೇವೆ ಆದುದರಿಂದ ಅದ್ವೈತಮತವು ಬೌದ್ಧಮತವು ಬೇರೆ. ಈ ವಾದಿಯು ದ್ವೇಷಮೂಲಕವಾಗಿ ನಮ್ಮ ಮತಕ್ಕೆ ಅವೈದಿಕವಾದ ಬೌದ್ಧಮತವೆಂದು ಹೇಳುತ್ತಾನೆ. ಕಾರಣ ಕೋರ್ಟಿನವರು ವಾದಿ ಕೇಳಿದ್ದು ಯಾವದೂ ಕೊಡದೆ ಕೇಸು ತೆಗೆದುಹಾಕ ತಕ್ಕದೆಂದು ಪ್ರಾರ್ಥನೆ.

## ವಾದಿವಕೀಲರ ರೀ ಆರ್ಗ್ಯುಮೆಂಟ.

ಕೋರ್ಟಿಗೆ ಪ್ರಭುಗಳೇ!

ಬೌದ್ಧರ ವಿಜ್ಞಾನವು ಕ್ಷಣಿಕವಾದದ್ದು (ಕ್ಷಣಿಕತ್ವ ಧರ್ಮವುಳ್ಳದ್ದು) ಅನೇಕವಾದದ್ದು (ಅನೇಕತ್ವ ವುಳ್ಳದ್ದು) ಎಂಬುವದು ಸುಳ್ಳು ಅದ್ವೈತ ಬ್ರಹ್ಮವು (ವಿಜ್ಞಾನವೂ) ವೇದಾಂತಗಳಿಂದ ತಿಳಿಯಲಿಕ್ಕೆ ಯೋಗ್ಯವಾದದ್ದು ಮತ್ತು ನಿತ್ಯವಾದದ್ದು (ನಿತ್ಯತ್ವವುಳ್ಳದ್ದು) ಒಂದಾದದ್ದು (ಏಕತ್ವವುಳ್ಳದ್ದು) ಎಂಬುವದು ಸುಳ್ಳು ಮತ್ತು ಇಂಥಾ ಭೇದಕ ಧರ್ಮಗಳಿಂದ ಅದ್ವೈತಿಗಳಿಗೆ ಆಸ್ತಿಕತ್ವವು ವೈದಿಕತ್ವವು ಬರಲಾರದು. ಅದ್ವೈತಿಗಳ ಬ್ರಹ್ಮನು (ಜ್ಞಾನವು) ನಿರ್ವಿಶೇಷ (ಸಕಲ ಧರ್ಮರಹಿತ) ವಾದದ್ದು ಎಂದು ವಸ್ಸುವದರಿಂದ ಅದ್ವೈತಿಗಳ ಜ್ಞಾನದಲ್ಲಿ ವೇದಾಂತವೇದ್ಯತ್ವವು ಇಲ್ಲ. ಏಕತ್ವವೂ ಇಲ್ಲ, ನಿತ್ಯತ್ವವೂ ಇಲ್ಲ, ಅದ್ವೈತಿಗಳು, ಮುಖ್ಯವೃತ್ತಿಯಿಂದಾಗಲೀ ಅಮುಖ್ಯವೃತ್ತಿಯಿಂದಾಗಲೀ ಶಬ್ದಗಳು ಪ್ರವೃತ್ತವಾಗುವದಕ್ಕೆ ಕಾರಣವಾದ ನಾಮ, ರೂಪ ಗುಣ ಕ್ರಿಯಾ, ಜಾತಿ, ಸಂಬಂಧ, ಭೇದ ಮುಂತಾದ ಧರ್ಮಗಳನ್ನು ಬ್ರಹ್ಮನಲ್ಲಿ ಒಪ್ಪ ವದಿಲ್ಲವಾದ್ದರಿಂದ ಮತ್ತು ಸ್ವಪ್ರಕಾಶ= ಇತರ ಪ್ರಮಾಣಗಳಿಂದ ಅಜ್ಞೇಯನು (ತಿಳಿಯಲಿಕ್ಕೆ ಅಯೋಗ್ಯನು) ಎಂತ ವಸ್ಸುತ್ತಾರಾದ್ದರಿಂದಲೂ ಬೌದ್ಧರ ವಿಜ್ಞಾನ ದಂತೆ ಅದ್ವೈತಿಗಳ ಬ್ರಹ್ಮನು ವೇದಾಂತಗಳಿಂದ ತಿಳಿಯುವದಕ್ಕೆ ಅಯೋಗ್ಯನು

"ನಮಾಕೇವಲತ್ವಂ" ಎಂಬ ಶ್ಲೋಕದಲ್ಲಿ ಶಂಕರಾಚಾರ್ಯರು ಏಕತ್ವ ಅವಿದ್ಯಾ ಕಲ್ಪಿತವಾದ್ದರಿಂದ ಬ್ರಹ್ಮನಲ್ಲಿ ಇಲ್ಲ ಎಂತ ಹೇಳಿದ್ದಾರೆ.

ಬೌದ್ಧರ ವಿಜ್ಞಾನವು ನಿರ್ವಿಶೇಷ (ಸಕಲ ಧರ್ಮರಹಿತವಾದದ್ದು) ವಾದ ದರಿಂದ ಆ ವಿಜ್ಞಾನದಲ್ಲಿ ಕ್ಷಣಿಕತ್ವವೂ ಇಲ್ಲ, ಅನೇಕತ್ವವೂ ಇಲ್ಲವಾದ್ದರಿಂ ಆ ಉಭಯರ ವಿಜ್ಞಾನತತ್ವಗಳಲ್ಲಿ ಭೇದವು ಬರುವದಿಲ್ಲ.

ಬ್ರಹ್ಮನಲ್ಲಿ ಏಕತ್ವಧರ್ಮವೂ, ನಿತ್ಯತ್ವಧರ್ಮವೂ ಇಲ್ಲವೇ ಹೋದರ ಬ್ರಹ್ಮನು ಏಕತ್ವ ಸ್ವರೂಪನು, ನಿತ್ಯತ್ವ ಸ್ವರೂಪನು ಬೌದ್ಧರ ವಿಜ್ಞಾನದ ಕ್ಷಣಿಕತ್ವಧರ್ಮವು ಇಲ್ಲದೆ ಹೋದರೂ ಆ ವಿಜ್ಞಾನವು ಕ್ಷಣಿಕತ್ವಸ್ವರೂಪ ಅನೇಕತ್ವಧರ್ಮ ಇಲ್ಲದೆ ಹೋದರೂ ಅನೇಕತ್ವಸ್ವರೂಪವು ಎಂಬುವ ಕೂಡುವದಿಲ್ಲ. ಯಾಕಂದರೆ ಏಕತ್ವವು ಅವಿದ್ಯಾ ಕಲ್ಪಿತವಾದದ್ದು, (ಸುಳ ಎಂದು ಅದ್ವೈತಿಗಳೇ ಹೇಳಿರೋಣದರಿಂದ, ಅವಿದ್ಯಾ ಕಲ್ಪಿತವಾದ (ಸುಳ್ಳಾ ಏಕತ್ವವು, ಅವಿದ್ಯಾಕಲ್ಪಿತ ನಾಗದೇ ಇದ್ದ (ಸತ್ಯವಾದ) ಬ್ರಹ್ಮಸ್ವರೂಪ

ಆಗುತ್ತದೆಂಬುವದು ಅತ್ಯಂತ ಅಸಂಭಾವಿತವು. ಎಲ್ಲ ಕಾಲದಲ್ಲಿ ಇರೋಣ (ಸಕಲಕಾಲ ವೃತ್ತಿತ್ವ) ಎಂಬ ನಿತ್ಯತ್ವವು ಸಖಂಡವಾದ್ದರಿಂದ (ಅನೇಕ ಪದಾರ್ಥಗಳಿಂದ ಕೂಡಿದ್ದು ಆದ್ದರಿಂದ) ಅಖಂಡವಾದ ಬ್ರಹ್ಮಸ್ವರೂಪವು ಆಗುವದಿಲ್ಲ. ಇದರಂತೆ ಒಂದು ಕ್ಷಣದಲ್ಲಿ ಇರೋಣ (ಏಕಕ್ಷಣ ವೃತ್ತಿತ್ವಂ) ಎಂಬ ಸಖಂಡವಾದ ಕ್ಷಣಿಕತ್ವವೂ ಅಖಂಡವಾದ ಜ್ಞಾನರೂಪವು ಆಗುತ್ತದೆ ಎಂಬುವದು ಕೂಡುವದಿಲ್ಲ. ಕಲ್ಪಿತವಾದ ಅನೇಕತ್ವವು ಸತ್ಯವಾದ ಜ್ಞಾನರೂಪವು ಆಗುತ್ತದೆಂಬುವದು ಕೂಡುವದಿಲ್ಲವಾದ್ದರಿಂದ (ನಿತ್ಯತ್ವವೂ ಏಕತ್ವವೂ ಬ್ರಹ್ಮಸ್ವರೂಪವೆಂಬುವದು, ಕ್ಷಣಿಕತ್ವವೂ, ಅನೇಕತ್ವವೂ ಬೌದ್ಧರ ವಿಜ್ಞಾನ ಸ್ವರೂಪ ವೆಂಬುವದು ಕೂಡುವದಿಲ್ಲವಾದುದರಿಂದ) ಈ ರೀತಿಯಿಂದ ಆ ವಿಜ್ಞಾನಗಳಿಗೆ ಭೇದವು ಕೂಡುವದಿಲ್ಲ.

ಬೌದ್ಧರಗಳಲ್ಲಿಯೂ ವಿಜ್ಞಾನವು ನಿತ್ಯವಾದದ್ದು ಉಂಟೆಂದು ಹೇಳುವವರು ಇದ್ದಾರೆಂದು ಅದ್ವೈತಿಗಳ ಗ್ರಂಥದಿಂದಲೂ ಬೌದ್ಧರ ಗ್ರಂಥದಿಂದಲೂ ಸಿದ್ಧಿಸುತ್ತದೆ. ಆದುದರಿಂದ ಬೌದ್ಧರ ಮತವು ಅದ್ವೈತರಮತವು ಒಂದೇ ಆಗುತ್ತದೆ. ಬೌದ್ಧರ ವಿಜ್ಞಾನವು ಅನಿತ್ಯವೂ, ಅದ್ವೈತಿಗಳ ವಿಜ್ಞಾನವು ನಿತ್ಯವೂ ಎಂದು ಇಟ್ಟುಕೊಂಡಾಗ್ಯೂ ನಾಸ್ತಿಕರಂತೆ ಬ್ರಾಹ್ಮಣಾದಿವರ್ಣ, ಯಜ್ಞ, ಸ್ನಾನ, ಸಂಧ್ಯಾ, ವೇದ, ತೀರ್ಥ, ಪರಲೋಕ, ಪುಣ್ಯಪಾಪ ಮುಂತಾದ ಯಾವತ್ತೂ ಸುಳ್ಳೆಂದು ಹೇಳೋಣದರಿಂದ "ನಹಿಸ್ವಸ್ಯ ಸುಖಾದ್ಯರ್ಥಂ ಧರ್ಮೇಕಶ್ಚಿತ್ ಪ್ರವರ್ತತೆ" ಯೆಂದು ಹೇಳಿದಪ್ರಕಾರ ಆಸ್ತಿಕರಂತೆ ಸ್ನಾನ, ಸಂಧ್ಯಾ, ವೇದಾಧ್ಯಯನ, ಭಗವತ್ ಪೂಜಾ, ಮುಂತಾದ್ದು ಮಾಡುವದು ಕೂಡುವದಿಲ್ಲವಾದ್ದರಿಂದ ಇಂಥಾ ಅಲ್ಪವೈಷಮ್ಯವು ಆ ಮತಕ್ಕೆ ವೈದಿಕತ್ವವನ್ನು ಸ್ಥಾಪನ ಮಾಡಲಾರದು. ಇಂಥ ಮತವನ್ನು ಸ್ವೀಕಾರ ಮಾಡಿದ ಅದ್ವೈತಿಗಳು ಆಸ್ತಿಕರೂ ವೈದಿಕರೂ ಆಗಲಾರರು. ಹೀಗೆ ಇದ್ದಾಗ್ಯೂ ಯಜ್ಞ, ವೇದಾಧ್ಯಯನ, ಭಗವತ್ ಪೂಜಾ, ಮುಂತಾದ್ದು ಮಾಡುವದು. ಆಸ್ತಿಕಜನರು ನಮ್ಮಮತವನ್ನು ಆಸ್ತಿಕಮತವೆಂದು ತಿಳಿದು ನಮ್ಮ ಮತವನ್ನು ಸ್ವೀಕಾರಮಾಡಬೇಕೆಂದು ವಂಚನಾರ್ಥವಾಗಿ ಮಾಡುತ್ತಾರೆ. ಬೌದ್ಧರೂಕೂಡ ಸ್ವರ್ಗಕಾಮುಶ್ಚೈತ್ಯಂವಂದೇತ ಎಂಬ ವಾಕ್ಯಗಳನ್ನು ಆಧಾರವಾಗಿ ಇಟ್ಟುಕೊಂಡು ಸ್ವರ್ಗಾದಿಗಳು ಮಿಥ್ಯಾ ಎಂದು ತಿಳಿದುಕೊಂಡಾಗ್ಯೂ, ಆ ಮಿಥ್ಯಾಭೂತವಾದ ಸ್ವರ್ಗ ಮೊದಲಾದ ಫಲೋದ್ದೇಶವಾಗಿ ಪುಣ್ಯಕರ್ಮಗಳನ್ನು ಅದ್ವೈತಿಗಳಂತೆ ಮಾಡುತ್ತಾರೆ. ಆದಕಾರಣ ಈವಿಷಯದಲ್ಲಿಯೂ ಎರಡು ಮತಗಳಿಗೆ ಭೇದವಿಲ್ಲಾ ಆದುದರಿಂದ ಆಸ್ತಿಕಜನರು ಈ ಅದ್ವೈತಿಗಳ ಉಪದೇಶದಿಂದ ಈ ಅವೈದಿಕವಾದ ಅದ್ವೈತಮತವನ್ನು ವೈದಿಕಮತವೆಂದು



ಈಪುಸ್ತಕಗಳು ಬೆಂಗುಳೂರು ಬಸವನಗುಡಿಪೋಸ್ಟ್ ಉತ್ತ
ಎಸ್. ಎಂ. ಎಸ್. ಏ. ಸಭಾ ಲೈಬ್ರೇರಿಯ
ವಿ. ಎಸ್. ದೇ ಶಿ ಕಾ ಚಾ ರ್ಯ ರ ಲ್ಲಿ ಯು

ಮದರಾಸು ತಿರುವಲ್ಲಿಕ್ಕೇಣಿ ಸಿಂಗರಾಚಾರಿ
೧೩. ನೆಂ ಉತ್ತರಾದಿಮಠದಲ್ಲಿರುವ
ಯಸ್. ರಾ ಮಾ ಚಾ ರ್ಯ ರ ಲ್ಲಿ ಯ
ದೊರಕುವದು.

